# श्री प्रसाद ಶ್ರೀ ಪ್ರಸಾದ SRI PRASADA

ಸಮಗ್ರ ಭಾರತದಲ್ಲಿ ಅನೇಕ ವರ್ಷಗಳಿಂದ ಸಂಚರಿಸುತ್ತಲಿರುವ
ಮಂತ್ರವಿದ್ಯೆಯಲ್ಲಿ ಪಾರಂಗತರಾದ ತನ್ನ ಮಂತ್ರಶಕ್ತಿಯಿಂದ
ಅನೇಕ ಜನರಿಗೆ ಪ್ರಯೋಜನವನ್ನುಂಟುಮಾಡಿದ
ಯೋಗಿ ಮಹಾಶಯರೊಬ್ಬರ

# ಮಹಾಮಂತ್ರಶಕ್ತಿಯ ಪ್ರಸಾದ

ಈ ಪ್ರಸಾದಗಳ ಸೇವನೆಯಿಂದಲೂ, ಧಾರಣೆಯಿಂದಲೂ, ಪ್ರಯೋಗದಿಂದಲೂ ಅನೇಕರು ಅನೇಕ ವಿಧಗಳಿಂದ ಪ್ರಯೋಜನವನ್ನು ಹೊಂದಿರುವರು.

*Personal interviews are prohibited*

**ಈ ಪ್ರಸಾದದಿಂದ**

ಮುಖತಃ ಭೇಟಿಯನ್ನು ಇಟ್ಟುಕೊಳ್ಳಲಾಗುವುದಿಲ್ಲ.

ಪರೀಕ್ಷೆಯಲ್ಲಿ ಪಾಸಾಗುವದು, ಶತ್ರುಗಳನ್ನು ಸ್ವಾಧೀನಪಡಿಸುವದು, ವ್ಯಾಪಾರದಲ್ಲಿ ಅಭಿವೃದ್ಧಿ ಹೊಂದುವದು, ಮುಂತಾದ ಯಾವತ್ತು ಅಭೀಷ್ಟಗಳನ್ನು ಸಾಧಿಸಬಹುದು.

**ಒಂದು ತಿಂಗಳು ಉಪಯೋಗಿಸುವ ಪ್ರಸಾದಕ್ಕೆ ರೂಪಾಯಿ ಒಂದು.**

**ವಿಶೇಷತರದ ಪ್ರಸಾದಕ್ಕೆ ರೂಪಾಯಿ ಐದು.**

**ಪ್ರಸಾದ ಬೇಕಾದವರು**— ತಮ್ಮ ನಕ್ಷತ್ರ, ಯಾ ಜನನ ಸಮಯವನ್ನೂ ತಾರೀಕನ್ನೂ ತಿಳಿಸಬೇಕು. ಅದು ಗೊತ್ತಿಲ್ಲದಿದ್ದರೆ ಕಾಗದಬರೆಯುವ ಸ್ಥಳ, ಸಮಯಗಳನ್ನೂ ನಿರ್ದೇಶಿಸಬೇಕು.

**ವಿ. ಪಿ. ಕ್ರಮವಿಲ್ಲ**—ಹಣವನ್ನು ಮುಂಗಡವಾಗಿಯೇ ಕಳುಹಿಸಬೇಕು. ಹಣವನ್ನು ಕಳುಹಿಸದೆ ಬರುವ ಕಾಗದಗಳಿಗೆ ನಿಗಾ ಕೊಡಲಾರದು.

**ಪತ್ರವ್ಯವಹಾರ:**— ಇಂಗ್ಲಿಷ್, ಸಂಸ್ಕೃತ, ಯಾ ಕನ್ನಡ ಭಾಷೆಯಲ್ಲಿ ಮಾಡಬಹುದು.

**ಎಲ್ಲ ಪತ್ರಗಳು ಗುಪ್ತವಾಗಿರಿಸಲಾಗುತ್ತವೆ.**

**C. C. No. 4.**

**C/o. ANTARANGA, UDIPI.**

This page is available for advertisement. Rate Rs. 15. (per insertion.)

# ಅಂತರಂಗ

ಸಂಪುಟ ೧. | ೨ ಒಕ್ಟೋಬರ್ '೩೮ ಆದಿತ್ಯವಾರ. | ಸಂಚಿಕೆ ೧೨.




### ಚಂದಾ ವಿವರ:

**ವಾರ್ಷಿಕ ಚಂದಾ ನೂರು ರೂಪಾಯಿ.**

ವಿ. ಪಿ. ಕ್ರಮವಿಲ್ಲ. ಹಣವನ್ನು ಮುಂಗಡವಾಗಿ ಕಳುಹಬೇಕು.

. . . .

**ಬಿಡಿ ಸಂಚಿಕೆ ಒಂದಾಣೆ.**

ನಿಮ್ಮ ಊರಿನ ಏಜಂಟರಿಂದ ಪಡಕೊಳ್ಳಿರಿ.

. . . . .

### ಜಾಹಿರಾತಿನ ದರ:

| | | | | |
|---|---|---|---|---|
| ಇಡೀ | ಪ್ರತಿ | ರೂಪಾಯಿ | ೧೦—೦—೦ | ಒಂದು ಸರ್ತಿಗೆ |
| ಅರ್ಧ | ,, | ,, | ೫—೦—೦ | ,, |
| ಕಾಲು | ,, | ,, | ೩—೦—೦ | ,, |
| ಅರೆಕಾಲು | ,, | ,, | ೨—೦—೦ | ,, |
| ಕಲಮು ಇಂಚಿಗೆ | | ,, | ೧—೦—೦ | ,, |

### ಜಾಹಿರಾತು ಕೊಡುವವರಿಗೆ ಸಲಹೆ:

೧. ಜಾಹಿರಾತಿನ ವಿಷಯಗಳು ಅಯೋಗ್ಯವಾಗಿ ಕಂಡುಬಂದಲ್ಲಿ ಮುದ್ರಿಸಲಾಗುವುದಿಲ್ಲ.

೨. ಒಂದೇ ಬದಿಯಲ್ಲಿ ವಿವರವಾಗಿ ಬರೆಯಬೇಕು.

೩. ಬದಲಾವಣೆಯಲ್ಲಿ ಒಂದು ವಾರ ಮುಂಚಿತವಾಗಿ ತಿಳಿಸಬೇಕು.

೪. ಬ್ಲೋಕುಗಳು ವಾಪಾಸು ಬೇಕಾದಲ್ಲಿ ಅವರವರ ಖರ್ಚಿನಿಂದಲೇ ವಾಪಾಸು ಪಡೆಯಬೇಕು.

೫. ಜಾಹಿರಾತಿನ ಬಾಬ್ತು ಹಣವನ್ನು ಮುಂಗಡವಾಗಿಯೆ ಕೊಡಬೇಕು.


**ಮಾಲಕರು ಮುದ್ರಕರು ವ ಪ್ರಕಾಶಕರು:**

## ಸಪ್ಲೈ ಏಜೆನ್ಸಿ ಲಿಮಿಟೆಡ್ ಉಡುಪಿ.

**ಮುದ್ರಣ ವ ಪ್ರಕಟಣಾ ಸ್ಥಳ: ಮಣಿಪಳ ಪವರ್ ಪ್ರೆಸ್, ಮಣಿಪಳ, ಉಡುಪಿ.**

# ಅಂತರಂಗ

## 'ನ-ಣ' ಸಮಸ್ಯೆ!

ಕನ್ನಡಿಗರಿಗೆ ಕರ್ನಾಟಕದಲ್ಲಿ ಎಷ್ಟೊಂದು ಮಮತೆಯಿದೆಯೆಂದರೆ 'ಕರ್ಣಾಟಕ'ವೊ ಅಥವಾ 'ಕರ್ನಾಟಕ'ವೊ ಎಂಬ ವಿಚಾರದಲ್ಲಿ 'ಮಹತ್ವ'ದ ಚರ್ಚೆಯೊಂದು ತಲೆದೋರಿದೆ. ಇದಕ್ಕಾಗಿ ತುಂಬಾ

## ಸಿಹಿ - ಕಹಿ

ಲನೆ ಮೆಟ್ಟಲಲ್ಲವೆ? 'ನ-ಣ' ಸಮಸ್ಯೆಯ ಚರ್ಚೆಯನ್ನು ಕಂಡು ಒಬ್ಬ ಕವಿಗಳಿಗೆ ಹೀಗೆ ಸ್ಫೂರ್ತಿ ಬಂದಿದೆಯಂತೆ.

ಎಂಬುದು ಹ್ರಸ್ವರೂಪವೆಂಬ ಆಜ್ಞೆಯನ್ನೂ ಹೊರಡಿಸಿದ್ದರೆ ಉತ್ತಮವಿತ್ತು.

ಕಾಶೀ ಮ್ಯುನಿಸಿಪಾಲಿಟಿಯವರು ಅವರ ಗಡಿಯೊಳಗಿರುವ ಮಂಗಗಳನ್ನು ಹಿಡಿದು ದೂರದ ಕಾಡಿಗೆ ಗಡೀಪಾರು ಮಾಡಬೇಕೆಂದು ಠರಾವು ಮಾಡಿದ್ದಾರೆ.

ಈ ಯುದ್ಧ ಕಾಲದಲ್ಲಿ ಆ ಮಂಗ

## ಹಿಟ್ಲರನ ಬಾಯೊಳಗೆ ಯುರೋಪಿನ ಮೂಲಂಗಿ !




ಇದೊಂದು ಫ್ರೆಂಚ್ ವ್ಯಂಗ್ಯ ಚಿತ್ರ. ಜರ್ಮನಿಯ ಹಿಟ್ಲರನ ಬಾಯೊಳಗೆ ಜೆಕೊಸ್ಲೋವೇಕಿಯದ ಅಧ್ಯಕ್ಷ ಡಾ| ಹಾರ್ಝಾರವರಿದ್ದಾರೆ. ಹಿಟ್ಲರನು ಜೆಕೊಸ್ಲೋವೇಕಿಯವನ್ನು ನುಂಗುವುದೊಂದೇ ಬಾಕಿಯುಳಿದಿದೆ.

ಕಂಠಶೋಷಣೆಯಾಗಿದೆ. ಧಾರಾಳ ಮಸಿಯು ಖರ್ಚಾಗಿದೆ. ಅನೇಕ ಲೇಖನಿಯ ತುದಿಗಳು ಮೊಂಡಾಗಿವೆ. ಹಲವರ ಕಾಲವು ಸುಮ್ಮಗೆ ವ್ಯಯವಾಗಿದೆ. ಇಷ್ಟೊಂದು ಗಹನ ಪ್ರಶ್ನೆಯನ್ನು ಚರ್ಚಿಸುತ್ತಿರುವುದಕ್ಕಾಗಿ ಸಮಸ್ತ ಕರ್ನಾಟಕಿಗರಿಗೆ 'ಆ-ಭಾರಿ' ಯಾಗಬೇಕಾಗಿದೆ. ಈ ಯತ್ನವು ಕರ್ನಾಟಕ (ದ) ಏಕೀಕರಣ ಯತ್ನದ ಮೊ

ಯಾವುದೌ ಹಿತ ನಿನಗೆ
ಮಾತೆ ಕರ್ನಾಟಕಿಯೆ?
ಮಧುರ 'ಕರ್ನಾಟಕ'ವೊ
'ಕರ್ಣಾಟಕ'ದ ಸ್ವರವೊ?

ಮಧ್ಯಪ್ರಾಂತ್ಯದಲ್ಲಿ ಗಾಂಧಿಯ 'ಮಹಾತ್ಮಾ' ಎಂದು ಕರೆಂಬ ಆಜ್ಞೆ ಜಾರಿ ಎಂಬು

ಗಳನ್ನು ಉಪಯೋಗಿಸಬಾರದೆ? ನಮ್ಮ ವೈಜ್ಞಾನಿಕರಾದ ಸರ್. ಪಿ. ಸಿ. ರೇ, ಸರ್. ಸಿ. ವಿ. ರಾಮನ್ ರವರೆಲ್ಲಿ? ಶ್ರೀ ರಾಮಚಂದ್ರನು ರಾಕ್ಷಸರೊಡನೆ ವಾನರ ಸೇನೆಯ ಸಹಾಯದಿಂದ ಹೋರಾಡಲಿಲ್ಲವೆ? ನಾವು 'ರಾಮರಾಜ್ಯ'ವನ್ನು ಆದರ್ಶವಾಗಿ ತೆಗೆದುಕೊಂಡಿರುವಾಗ ಆ ಕಾಲದ ಸೈನ್ಯವನ್ನೇಕೆ

ಬಾರದು. ಹಿಟ್ಲರೂ ಹರೆಯದ ತರುಯರೊಂದಿಗೂ. ಪೇತ್ರು ಎಂಬ ಸುಂಗಳಿಗೂ ಯುವಕನೊಬ್ಬನಿಗೆ ಆಕೆಯನ್ನು ವಿವಾಹಮಾಡಿ ಕೊಡುವು

# ರುಮೇನಿಯದ     

# ಅಡವಿಯ ಹುಡುಗಿಯೊಬ್ಬಳ

#      ನಿಗೂಢ ಜೀವನ

**ನಂಬಲಸಾಧ್ಯವಾದರೂ ಸತ್ಯವಾದ ಈ ವಿಚಿತ್ರ ನಾಟಕದ ನಾಯಕಿ ರುಮೇನಿಯದ ಓರ್ವ ಸುಂದರಿ. ದಟ್ಟಡವಿಯಲ್ಲಿ ಏಳು ವರುಷಗಳ ತನಕ ಅಂಡಲೆದು ಕೊನೆಗೆ ಅಡವಿಯ ಹುಡುಗಿಯಾಗಿ ನಾಡಿಗೆ ಹಿಂತೆರಳಿದಳು!**

• ○ •

ಅಡವಿಯ ಕರೆ...ಕಾಡಿನ ಶಕ್ತಿ ......ನಿಮಗಿಚ್ಛೆಯಿದ್ದ ಹೆಸರಿನಿಂದ ಕರೆಯಿರಿ; ಆದರೆ ಅಜ್ಜಿಕತೆಯೆಂದು ಇದನ್ನು ಕಡೆಗಣಿಸಬೇಡಿರಿ. ಅಡವಿಯ ವಿಚಿತ್ರ ಕರೆಯೊಂದು ರುಮೇನಿಯದ ಹುಡುಗಿಯೊಬ್ಬಳಿಗೆ ಕೇಳಿಸಿತು. ಆಕೆಯು ಆ ಕರೆಯನ್ನು ಮನ್ನಿಸುವುದಕ್ಕಾಗಿ ಜಗತ್ತನ್ನು ತೊರೆದಳು. ತೋಳಗಳೊಡನೆ ಕಾಡಿನಲ್ಲಿ ಜೀವಿಸಿದಳು. ಉಗುರುಗಳಿಂದ ಚುಚ್ಚಿ ಆಹಾರವನ್ನು ತಿನ್ನತೊಡಗಿದಳು. ಕೂಗುವ ತೋಳಗಳೊಡನೆ ಬತ್ತಲೆಯಾಗಿ ನಡೆದಳು!

+ + +

ಹತ್ತು ವರುಷಗಳ ಹಿಂದಿನ ಮಾತು. ರುಮೇನಿಯದ ಸುಜಾಜ್ ಎಂಬ ಗ್ರಾಮದ ಜೋನಾ ಮಾಂಡ್ರಿಲಾ ಎಂಬೋರ್ವ ಏಳು ವರುಷದ ಹುಡುಗಿಯು ವನಪುಷ್ಪಗಳನ್ನು ಸಂಗ್ರಹಿಸುವುದಕ್ಕೆಂದು ಹೋದವಳು ಕಾಡುಪಾಲಾದಳು. ಬೇಸಿಗೆ ಕಾಲದಲ್ಲಿ ಆಕೆಯು ಮರಗಳಡಿಯಲ್ಲಿ ವಾಸಿಸಿದಳು. ಚಳಿಗಾಲದಲ್ಲಿ ಮಗದ್ಧ ಪೊಟರೆಗಳೆಡೆಯಲ್ಲಿ ಜೀವಿಸಿ

ಘೋರ +

ದುದೇ ತಡ. ಜೋನಾಳು ಹೋ

ಯಲ್ಲಿ ನಿರ್ಭೀತಿಯಿಂದ ತಿರುಗುವ ಕಾಡುಹುಡುಗಿಯಾದಳು. ಏಕಾಂ





ಮರದಲ್ಲಿದ್ದ ಮುಖವೊಂದು ಆಕೆಯು ಅಡವಿಗೆ ಹೋಗಬೇಕೆಂದು ಹೇಳಿತು. ಆ ಕರೆಯನ್ನು ಜೋನಾ ತಡೆಯಲಾರದಾದಳು. ತನ್ನ ಮಮತೆಯ ತೋಳಗಳೊಡನೆ ಜೀವಿಸಲು ಆಕೆಯ ಹೃದಯವಾಶಿಸಿತು. ಒಲವಿನ ಪೇತ್ರುವನ್ನು ಆಕೆಯಲಕ್ಷಿಸಿದಳು. ಉಟ್ಟ ಬಟ್ಟೆಯನ್ನು ಹರಿದು ಚೂರು ಮಾಡಿ ತನ್ನ ನೊಂದ ಜೀವನದ ಮಂದಿರವನ್ನು ಪ್ರವೇಶಿಸಿದಳು. (ಎಡಗಡೆಯಲ್ಲಿ) ತೋಳಗಳ ಭಾಷೆಯನ್ನಾಡಬಲ್ಲ ವಿಚಿತ್ರ ತರುಣಿ ಜೋನಾಮಾಂಡ್ರಿಲಳ ಭಾವಚಿತ್ರ.

ಗಿನಿಯಾಗಿ ವನ್ಯ ಜಂತುಗಳೊಡನೆ ಜೀವಿಸಿದಳು.

+ + +

**ಅದೊಂದು ಸುಪ್ರಭಾತದಲ್ಲಿ**

**ಜೋನಾ ತಿರುಗುತ್ತಿರುವಾಗ ತೋಳಗಳ ಗುಂಪೊಂದನ್ನು ಕಂಡಳು. ಹಲವಾರು ತೋಳಗಳು ಕುರಿಯ ಮಾಂಸವನ್ನು ತಿನ್ನುವುದರಲ್ಲಿ ಮಗ್ನವಾಗಿದ್ದುವು.**

ಮಾಂಸ ತಿಂದು ಹೊಟ್ಟೆ ತುಂಬಿದ್ದುದರಿಂದ ತೋಳಗಳು ಆಶ್ಚರ್ಯದಿಂದ ಆಕೆಯನ್ನು ನೋಡಲಾರಂಭಿಸಿದುವು. ಆಕೆಯ ಬಾಡಿದ ಮುಖ, ಆಹಾರಕ್ಕಾಗಿ ಹಾತೊರೆಯುತ್ತಿದ್ದ ಬಾಯಿಯನ್ನು ಕಂಡು ತೋಳಗಳು ತಿಂದುಳಿದ ಮಾಂಸವನ್ನು ಆ ಹುಡುಗಿಗೆ ತಿನ್ನಬಿಟ್ಟುವು. ಅನಂತರ ಜೋನಾ ತೋಳಗಳೊಡನೆ ಹೋದಳು.

+ + +

**ಮಾತಾಡುವುದನ್ನೇ ಮರೆತುಬಿಟ್ಟಳು!**

ದಟ್ಟಡವಿಯಲ್ಲಿ ಜನರಿಲ್ಲದಿದ್ದುದರಿಂದ ಏಳು ವರುಷದ ಜೋನಾ ಮಾತಾಡುವುದನ್ನೇ ಮರೆತುಬಿಟ್ಟಳು. ಆಕೆಯೊಡನಿದ್ದ ಸಂಗಾತಿಗಳೆಂದರೆ ಕೂಗುವ ತೋಳಗಳು.

+ + +

ವನ್ಯಜಂತುವಿನಂತೆ ಜೋನಾ ಏಳು ವರುಷಗಳ ತನಕ ಕಾಡಿನ

ವಾಸಿಸಿದಳು. ಒಂದು ದಿನ ರಾತ್ರಿ. ಕಾರಿರುಳು! ಮರ ಕಡಿಯುವ ಕೆಲವು ಮಂದಿ ಬೆಂಕಿಯ ರಾಶಿಯ ಸುತ್ತು ಕುಳಿತಿದ್ದುದನ್ನು ಆಕೆಯು ಕಂಡಳು. ಆಕೆಯ ನೆರಳನ್ನು ಕಂಡೊಡನೆಯೇ ಹೆದರಿಕೆಯಿಂದ ಒಬ್ಬನು ಗುಂಡೆಸೆದೇ ಬಿಟ್ಟನು. ಮನುಷ್ಯಾಕೃತಿಯ ನೆರಳು! ಮರಿ ಕಡಿಯುವವರಿಗೆ ಮಹದಾಶ್ಚರ್ಯವಾಯಿತು. ಸೋಜಿಗದಿಂದ ಎಲ್ಲರೂ ಎದ್ದು ನಿಂತು ಹುಡುಕಿದರು. ಪ್ರಾಣಿಯಲ್ಲ. ಮನುಷ್ಯರೂಪದ ಜೀವಿಯೆಂಬುದು ಅವರಿಗರಿತೊಡನೆಯೇ ಆಕೆಯು ಪೊದರುಗಳಡಿಯಲ್ಲಿ ಅವಿತುಕೊಂಡು ಮಾಯವಾದಳು.

‡ ‡ ‡

“ಓ! ಅದೊಂದು ತೋಳ” ಎಂದೊಬ್ಬ ಮರ ಕಡಿಯುವವನು ಹೇಳಿದ. ಜೋನಾ ಬೆದರಿಕೆಯಿಂದ ತೋಳಗಳ ವಸತಿಗೆ ಓಡಿದಳು. ಕೋವಿಗಳನ್ನು ಹಿಡಿದಿದ್ದ ಮರ ಕಡಿಯುವವರು ಆಕೆಯನ್ನು ತೋಳಗಳ ವಸತಿಯ ತನಕ ಹಿಂಬಾಲಿಸಿದರು. ಮಲಗಿ ನಿದ್ರಿಸಿದಾಗ ಆಕೆಯನ್ನವರು ಹಿಡಿದರು. “ನೋಡು, ಆಕೆಯೊಬ್ಬ ಹುಡುಗಿ” ಯೆಂದೊಬ್ಬನು ಆಶ್ಚರ್ಯದಿಂದ ಹೇಳಿದ್ದೇ ತಡ—ಎಲ್ಲರೂ ತಮ್ಮ ಆಯುಧಗಳನ್ನೆತ್ತಿ ವಿಚಿತ್ರ ಕಾಡುಪ್ರಾಣಿಯನ್ನು ಕೊಲ್ಲಲು ಸನ್ನದ್ಧರಾದರು.

‡ ‡ ‡

ಅವರ ಮಾತನ್ನು ಕೇಳಿ ಜೋನಾಳಿಗೆ ಎಚ್ಚರವಾಯಿತು. ನೋಡುತ್ತಾಳೆ—ಮನುಷ್ಯರು. ಈ ಕೆಯ ನಗ್ನ ದೇಹ, ಪಾದದ ವರೆಗಿದ್ದಿರುವ ಕೇಶರಾಶಿಯನ್ನು ಕಂಡು ಅವರಿಗೂ ವಿಚಿತ್ರವೆನಿಸಿತು.

‡ ‡ ‡

ಏಳು ವರುಷಗಳ ನಂತರ ಈ ರೀತಿಯಲ್ಲಿ ಜೋನಾ ಕಂಡು ಹಿಡಿಯಲ್ಪಟ್ಟಳು. ಆದರೆ ಜೋನಾ ತನ್ನ ವನ್ಯ ಸ್ವಭಾವವನ್ನು ಬಿಡಲಿಲ್ಲ. ಕೈಕಾಲು ಕಟ್ಟಿ ಆಕೆಯನ್ನು ಮರ ಕಡಿಯುವವರು ಸಮೀಪದ ಒಂದು ಗ್ರಾಮಕ್ಕೆ ಕೊಂಡೊಯ್ದರು. ಆಡವಿಯ ಹುಡುಗಿಯ ನಿಗೂಢ ಸುದ್ದಿಯು ಎಲ್ಲೆಡೆಗಳಲ್ಲಿಯೂ ಹಬ್ಬಿತು. ಆಕೆಯ ಜನ್ಮ ಚಿಹ್ನೆಯನ್ನು ಕೈಯಲ್ಲಿ ನೋಡಲಾಗಿ ಆಕೆಯು ಯಿಯೋನ್ ಮಾಂಡ್ರಿಲಳ ಕಾಣೆಯಾದ ಮಗಳೆಂದು ಗುರುತು ಹಚ್ಚಲ್ಪಟ್ಟಿತು. ಆಕೆಯನ್ನು ಸಾಧುಮಾಡಲು ತಂದೆ ತಾಯಿಗಳು ಅನೇಕ ತಿಂಗಳುಗಳ ತನಕ ಯತ್ನಿಸಬೇಕಾಯಿತು. ಮಾತು ಕಲಿಸಲು ಹಲವು ವರುಷಗಳು ಕಳೆಯಬೇಕಾಯಿತು.

**ಮೂರು ವರುಷಗಳಾದ ಬಳಿಕವೂ ಆಕೆಯು ಹೊರಗೆ ಹೋಗದಂತೆ ಜಾಗ್ರತೆ ತೆಗೆದುಕೊಳ್ಳುತ್ತಿದ್ದುದಲ್ಲದೆ ತಂದೆ ತಾಯಿಗಳು ಮನೆಯಲ್ಲಿ ಒಬ್ಬಳನ್ನೇ ಬಿಟ್ಟು ಹೋಗುತ್ತಿದ್ದಿಲ್ಲ.**

‡ ‡ ‡

ನಾಡಿನ ಜೀವನವು ಆಕೆಗೆ ಮೆಚ್ಚಲಿಲ್ಲ. ಬಾಗಿಲು ಮುಚ್ಚಿ ಮನೆಯೊಳಗೆ ಮಲಗುವುದು ಅವಳಿಗೊಗ್ಗಲಿಲ್ಲ. ಬೇಯಿಸಿದ ಆಹಾರವು ಅವಳಿಗೆ ರುಚಿಸುತ್ತಿದ್ದಿಲ್ಲ. ಬಟ್ಟೆ ಬರೆಗಳನ್ನು ಧರಿಸುವುದೆಂದರೆ ಆಕೆಗಾಗುತ್ತಿದ್ದಿಲ್ಲ. ಯಾವುದಾದರೊಂದು ಕೆಲಸವನ್ನು ಕೊಟ್ಟರೆ ಆಕೆಗೆ ಅಸಾಧ್ಯ ಸಿಟ್ಟು ಬರುತ್ತಿತ್ತು. ಕೆಲವೊಮ್ಮೆ ಆಕೆಯು ಹಲವು ತಾಸುಗಳ ತನಕ ಮರಗಳನ್ನು ನೋಡಿ ಕುಳಿತುಕೊಳ್ಳುವದಿತ್ತು.

‡ ‡ ‡

## ಮದುವೆ ಬೇಡ

ಜೋನಾ ನಡು ಹರೆಯದ ತರುಣಿಯಾದಳು. ಪೇತ್ರು ಎಂಬ ಸುಂದರ ಯುವಕನೊಬ್ಬನಿಗೆ ಆಕೆಯನ್ನು ವಿವಾಹಮಾಡಿ ಕೊಡುವ

**ವಿಶ್ವವೈಚಿತ್ರ್ಯ . . . . . . . . . . . . ಕ್ರಿಮಿಕುಂಬಾರ**



ದಕ್ಷಿಣ ಅಮೇರಿಕದ ಈ ಕ್ರಿಮಿಕುಂಬಾರನು ಸೊಬಗಿನೊಂದಿಗೆ ಜ್ಞಾನವನ್ನು ಸಮ್ಮಿಲನಗೊಳಿಸಿ ಆ ಚಿಕ್ಕ ಗಡಿಗೆಗಳಲ್ಲಿ ತನಗೆ ಬೇಕಾದ ಆಹಾರವನ್ನು ಶೇಖರಿಸಿಡುತ್ತಾನೆ. ಜವುಗು ಸ್ಥಳದಿಂದ ಈ ಕ್ರಿಮಿಯು ಮಣ್ಣನ್ನು ತಂದು ತನ್ನ ಮುಂಗಾಲಿನಿಂದ ಸುಂದರವಾದೊಂದು ಗಡಿಗೆಯನ್ನು ರಚಿಸುತ್ತದೆ. ಈ ಗಡಿಗೆಯೊಳಗೆ ಜೇಡರಬಲೆ ಮೊದಲಾದ ಆಹಾರವನ್ನು ತುಂಬುತ್ತದೆ. ಮನೆಗಳಲ್ಲಿಯೂ ಕೆಲವೊಮ್ಮೆ ಅದು ‘ಗಡಿಗೆ.ಮನೆ’ಗಳನ್ನು ಕಟ್ಟುವುದುಂಟು.

ದೆಂದಾಯಿತು. ಅವಳನ್ನು ಮದುವೆಯಾಗಬೇಕೆಂಬ ಆಶೆಯು ಅವನಲ್ಲಿ ಹೆಚ್ಚುತ್ತಾ ಬಂತು. ನೆರೆಹೊರೆಯವರು ಆ ಪ್ರಕೃತಿ ಕನ್ನೆಯನ್ನು ಮದುವೆಯಾಗಬಾರದೆಂದು ಅವನಿಗೆ ಎಚ್ಚರಿಕೆಯನ್ನಿತ್ತರು.

‡ ‡ ‡

ಏಳು ವರುಷಗಳ ವನ್ಯ ಜೀವನದ ನೆನಹನ್ನು ಆಕೆಯಿಂದ ಹೊಡೆದೋಡಿಸಬೇಕಾದರೆ ಮದುವೆಯೇ ಉತ್ತಮೋಪಾಯವೆಂದು ಬಗೆದು ಜೋನಳ ತಂದೆ ತಾಯಿಗಳು ಪೇತ್ರುವಿನೊಡನೆ ವಿವಾಹ ನಿಶ್ಚಯ ಮಾಡಿದರು. ಮರಗಳೆಡೆಯಲ್ಲಿ ಸುಳಿಯುವ ಗಾಳಿಯಂತೆ ಸ್ವತಂತ್ರವಾಗಿ ಅಲೆದಾಡುತ್ತಿದ್ದ ಆಕೆಯ ಗತಜೀವನದ ಮಧುರ ನೆನಹನ್ನು ಅವಳು ಮಾಡದಂತಾಗಬೇಕಾದರೆ, ಮಮತೆಯ ಗಂಡ, ಪ್ರೀತಿಯ ಮಕ್ಕಳು ಅವಶ್ಯವೆಂದು ಹಿರಿಯರು ಭಾವಿಸಿದರು.

‡ ‡ ‡

ಹೀಗೆ ಮದುವೆಯ ಏರ್ಪಾಡಾಯಿತು. ಪೇತ್ರು ಜೋನಳೊಡನೆ ಆನಂದದ ವೈವಾಹಿಕ ಜೀವನವನ್ನು ನಡೆಸ ಬಹುದೆಂದು ಭಾವಿಸಿದನು.

‡ ‡ ‡

**ಆ ಮುಖ!**

ಭೀಕರ ದಿನವೊಂದು ಬಂದೇ ಬಿಟ್ಟಿತು! ಆಕೆಯೊಡನೆ ಅವನು ಕುರಿ ಮೇಯಿಸಲೆಂದು ಬೆಟ್ಟಕ್ಕೆ ತೆರಳಿದ್ದನು. ನವ ಮಿತ್ರರು ಮರದ ಕಾಂಡಕ್ಕೆ ಬೆನ್ನನ್ನೊರಗಿಸಿ ಹಸುರು ಹುಲ್ಲಿನ ಮೇಲೆ ಸುಖವಾಗಿ ಕುಳಿತಿದ್ದರು. ಜೋನಾ ತನ್ನ ಎದುರಿಗಿದ್ದ ಕಾಡಿನ ನೈಸರ್ಗಿಕ ಸೌಂದರ್ಯವನ್ನು ಸವಿಯುತ್ತಿದ್ದಳು. ಪೇತ್ರು ತನ್ನ ಕೋವಿಯ ನಳಿಗೆಯನ್ನು ಸರಿಮಾಡುತ್ತಿದ್ದನು.

‡ ‡ ‡

“ನಾನು ಮರಗಳ ತುದಿಗಳನ್ನು ನೋಡಿದಂತೆಯೇ ದೂರದ ಕರೆಯೊಂದು ನನ್ನನ್ನು ಕಾಡಿಗೆ ಬಾರೆಂದು ಹೇಳುತ್ತಿದೆ . . . . ಮರ ಕಡಿಯುವವರು ಬರುವ ಮೊದಲು ಕಾಡಿನಲ್ಲಿ ನನಗೆ ಕಾಣಿಸುತ್ತಿದ್ದ ಮುಖವೊಂದು ಈಗಲೂ ನನ್ನೆದುರಿದೆ'. ಎಂದಳು ಜೋನಾ.“ಏನು ಹುಚ್ಚು, ಎಂಥಾ ಮುಖ. ಅದೆಲ್ಲಾ ನಿನ್ನ ಭಾವನೆ. ಮದುವೆಯಾದ ಸ್ವಲ್ಪ ಸಮಯದ ಬಳಿಕ ಅಂಥ ಭಾವನೆಗಳು ನಿನ್ನಿಂದ ದೂರವಾಗುವವು” ಎಂದನು ಪೇತ್ರು.

**“ಹೇಗಾಗುವುದೆಂದು ನೋಡೋಣ. ಅಯ್ಯೊ! ನಾನದನ್ನು ನೋಡುತ್ತಿದ್ದೇನೆ. ನೋಡು, ನೋಡು, ಅಲ್ಲಿ- ಆ ಮರದಲ್ಲಿ! ಕಾಣಿಸುವುದಿಲ್ಲವೆ?” ಆಶ್ಚರ್ಯದಿಂದ ಹೇಳಿದಳು — ಜೋನಾ.**

‡ ‡ ‡

ಇಷ್ಟಾಗುವಾಗ ತೋಳಗಳ ಗುಂಪೊಂದು ಬಲಗಡೆಯಿಂದ ಬಂದು ಅವಳನ್ನು ಕಂಡೊಡನೆ ಹಠಾತ್ತಾಗಿ ನಿಂತುಬಿಟ್ಟಿತು. ಬಳಿಯಲ್ಲಿದ್ದ ಕುರಿಗಳು ಮೇಯುತ್ತಿದ್ದುವು.

“ತೋಳ! ತೋಳ!” ಕೂಗಿದಳು ಜೋನಾ. ಪೇತ್ರುವಿಗೆ ಆಶ್ಚರ್ಯವಾಯಿತು. “ಅಲ್ಲಿ ನೋಡು- ತೋಳಗಳ ತಂಡವೇ ನಮ್ಮ ಮುಂದಿದೆ. ಅವುಗಳು ಬರುವುವೆಂದು ನನಗೆ ಮೊದಲೇ ಗೊತ್ತಿತ್ತು. ಆ ಮುಖವು ಅವುಗಳನ್ನಿಲ್ಲಿಗೆ ಕಳುಹಿಸಿತು.”

ಬಾಲಗಳನ್ನು ಮೇಲೆ ಮಾಡಿ ತೋಳಗಳ ದೊಡ್ಡದೊಂದು ಗುಂಪು ಅವರ ಸಮೀಪಕ್ಕೆ ಬಂತು. ಪೇತ್ರು ತನ್ನ ಕೋವಿ ಹಿಡಿದೆದ್ದು ಅವುಗಳಿಗೆ ಗುಂಡೆಸೆಯುವಾಗ ಜೋನಾ ಕಾಡುಬೆಕ್ಕಿನಂತೆ ಅವನ ಮೇಲೆ ಹಾರಿದಳು. ಕೋವಿಯನ್ನು ಅವನ ಕೈಯಿಂದ ಸೆಳೆದೊಯ್ದು ದೂರ ಬಿಸಾಡಿ ಬಿಟ್ಟಳು. ಪೇತ್ರು ಭಯಾಶ್ಚರ್ಯಗಳಿಂದ ನೋಡುತ್ತಿದ್ದಾಗ ಆಕೆಯು ತೋಳಗಳೆಡೆಗೆ ಓಡುತ್ತಿದ್ದಳು!

‡ ‡ ‡

“ಜೋನಾ, ಜೋನಾ, ಜೋನಾ- ಅವುಗಳು ನಿನ್ನನ್ನು ಹರಿದು ಚೂರು ಮಾಡುವುವು- ಹಿಂದೆ ಬಾ” ಎಂದು ಪೇತ್ರು ಕೂಗಿ ಕರೆದನು.

‡ ‡ ‡

ವಿಚಿತ್ರ ನಗುವೊಂದು ಪೇತ್ರುವಿಗೆ ಕೇಳಿಸಿತು. ಅಡವಿಯ ಕರೆಯೊಂದು ಆಕೆಯನ್ನು ಸೆಳೆದೊಯ್ಯಿತು. “ಆಕೆಯು ನಿಸರ್ಗ ದೇವಿಯ ಮನೆಯೆಡೆಗೆ ನಡೆದಳು.”

‡ ‡ ‡

ಕ್ಷಣಮಾತ್ರದಲ್ಲಿ ಎಲ್ಲಾ ತೋಳಗಳು ಆಕೆಯ ಸುತ್ತುಗೂಡಿದುವು. ಸಂತೋಷದಿಂದ ಹಲವು ತೋಳಗಳು ಆಕೆಯ ಮುಖವನ್ನು ನೆಕ್ಕುತ್ತಿದ್ದುವು. ಜೋನಾ ತೋಳಗಳ

ಭಾಷೆಯಲ್ಲಿ ಮಾತಾಡುತ್ತಿದ್ದಳು.

**ಪೇತ್ರು ತನ್ನ ಕೋವಿಯನ್ನು ಹೆಕ್ಕಿ ಕೋಪದಿಂದ ಆಕೆ ಯೋಡಿದ ದಾರಿಯಲ್ಲಿ ಮುನ್ನಡೆದನು.**

**ಕೋಳಗಳ ರಾಜ್ಯಕ್ಕೆ**

ಆದರೆ ಅವನು ಹೊರಡುವಾಗಲೆ ತಡವಾಗಿತ್ತು. ಜೋನಾ ತನ್ನ ಮೈಮೇಲಿದ್ದ ಬಟ್ಟೆಬರೆಗಳನ್ನು ಹರಿದು ಚೂರು ಚೂರುಮಾಡಿ ಗಾಳಿಗೆ ಬಿಟ್ಟು ಬಿಟ್ಟಳು. ಆಕೆಯು ತನ್ನ ಮಮತೆಯ ಅಡವಿಗೆ ಓಡುತ್ತಿದ್ದಾಗ ಅವಳ ನೀಳವಾದ ಕೇಶರಾಶಿಯು ಗಾಳಿಗೆ ಹಾರಿ ನುಣ್ಣಗಿನ ತೊಡೆಗಳನ್ನು ಸಮುದ್ರದ ತೆರೆಗಳಂತೆ ಬಡೆಯುತ್ತಿತ್ತು.

**ಪೇತ್ರು ನಿರಾಶನಾಗಿ ಕಾಡಿನೆಡೆಗೆ ನೋಡುತ್ತಿದ್ದನು. ಅದೋ, ಹಸುರು ಹಿಂಬದಿಯಲ್ಲಿ ಜೋನಳ ಬಿಳಿ ಶರೀರವು ವನದೇವತೆಯಂತೆ ಮುದ್ದು ಮುದ್ದಾಗಿ ಕಾಣಿಸುತ್ತಿತ್ತು.**

ದೊಡ್ಡ ಮರದ ತುದಿಯನ್ನು ನೋಡುತ್ತಾ ಆಕೆಯು ತನ್ನೆರಡೂ ಕೈಗಳನ್ನು ಚಾಚಿದ್ದಳು. ಪ್ರಾಯಶಃ ಆಕೆಗೆ ಮರದ ಮೇಲೊಂದು ಮುಖವು ಕಾಣಿಸಿರಬಹುದು!

---

(೧೦ನೇ ಪುಟದಿಂದ)

ಸೀನಪ್ಪನು ಹೇಳಿದಂತೆ ಕಾಂಗ್ರೆಸ್ ಕುಣಿಯುವಂತಾದರೆ ಅದರಲ್ಲಿಯೂ ಬೇಸರವಿಲ್ಲ. ಆದರೆ ಅವನ 'ಚೆಕ್- ಬುಕ್' ಕಾಗದದ ಒಂದು-ಎರಡು ಅಂಕೆಯಷ್ಟೆ ಕುಣಿತದ ಹೆಜ್ಜೆಯನ್ನೂ ಹಾಕಬೇಕಾಗುತ್ತದಲ್ಲಾ- ಅದು ವ್ಯಸನಕರ.

೦ ೦ ೦

ಶಿಸ್ತು ಜಾರಿ ಮಾಡುವ ಅಧಿಕಾರವು ಅದರ ಕೈಯಲ್ಲಿಯೆ! ಶಿಸ್ತಿಗೊಳಗಾಗದ ಕಾರ್ಯವನ್ನು, ಅದರ ಒಳಗೆ ಬರುವಂತೆ ಮಾಡಬಹುದು- ಶಿಸ್ತಿಗೊಳಗಾಗುವ ಕಾರ್ಯವನ್ನು ಶಿಸ್ತು ತಾಗಿಸದೆ ಬಿಡಬಹುದು. ಚೆಕ್- ಪುಸ್ತಕವಿರುವಷ್ಟು ಕಾಲ ಈ ಜಾದು ವಿದ್ಯೆ ನಡಿಸಬಹುದು.

೦ ೦ ೦

ಕೆಲಸಗಾರರ ತ್ಯಾಗದ ಹಳೇ ರಿಕಾರ್ಡು ಹೊಸಕಾಲಕ್ಕಾಗುವದಿಲ್ಲ. ಹೊಸ ಕಾಲಕ್ಕೆ ಇಲ್ಲಿಂದಿಲ್ಲಿಗೆ ವಹಿವಾಟು ನಡಿಸುವ ಹೊಸ ರಿಕಾರ್ಡು ಬೇಕು- ಅದೇ 'ಚೆಕ್- ಬುಕ್!' ಜೈ ಚೆಕ್ ಬುಕ್ ಮಹಾರಾಜ ಕೀ ಜೈ.

೦ ೦ ೦

ಚೆಕ್ ಬುಕ್ಕಿನ ಕಾಗದ ಹರಿಯಲಿಕ್ಕಾಗುತ್ತದೆ; ಅಂಟಿಸಲಿಕ್ಕಾಗುವದಿಲ್ಲ. ಕಾಗದವೆಲ್ಲಾ ಹರಿದ ಮೇಲೆ ಕಾಂಗ್ರೆಸ್ ಕೀ ಜೈ ಎನ್ನುವ ಇನ್ನೊಂದು ಹೊಸಕಾಲ ಬರಬಹುದು!



# ಸರ್ವಾಧಿಕಾರಿಗಳ ಯುಗದಲ್ಲಿ

"ಒಬ್ಬ ಕಾಂಗ್ರೆಸ್ ಸದಸ್ಯನಿಂದ"

●

ಸರ್ವಾಧಿಕಾರಿಗಳ ಯುಗವಿದು. ಇಟಲಿ ಜರ್ಮನಿಗಳಲ್ಲ ಸರ್ವಾಧಿಕಾರವಿರುವುದಂತಿರಲಿ, ಪ್ರತಿಯೊಂದು ಹಳ್ಳಿಪಳ್ಳಿಗಳಲ್ಲಿಯೂ ಸರ್ವಾಧಿಕಾರ ನಡೆಸಲು ಹಾತೊರೆಯುವವರು ಹಲವಾರು ಮಂದಿ!

o o o

ಸರ್ದಾರ್ ಪಟೇಲರು "ಸವ್ವಾ ಹಿಟ್ಲರ್"ರಾಗಲಿಚ್ಛಿಸಿದರು. ಪಟೇಲರಂಥವರು ಹೀಗನ್ನುವಾಗ ಮಿಕ್ಕುಳಿದವರು ಸುಮ್ಮನಿರುವರೇ? ಇಲ್ಲ.

o o o

ಕರ್ನಾಟಕದಲ್ಲಿಯೂ ಸರ್ವಾಧಿಕಾರ. ತತ್ವದಲ್ಲಿ ಸಮತಾವಾದಿಗಳಾಗಿದ್ದವರಿಗೂ ಬೇಕಾದುದು ಸರ್ವಾಧಿಕಾರ. ಈ ಸರ್ವಾಧಿಕಾರ ನಡೆಸಲು ಮೊದಲು ಬೇಕಾದುದು ಪತ್ರಿಕೆಗಳ ಮೇಲೆ ಅಧಿಕಾರ ನಡೆಸುವ ಹಕ್ಕು!

o o o

ಆರ್ಥಿಕ ಮುಗ್ಗಟ್ಟಿನ ಈ ಯುಗದಲ್ಲಿ ಬಡ ಪತ್ರಿಕೋದ್ಯಮಿಗಳು ಆ ಸರ್ವಾಧಿಕಾರಿಗಳ ಚೆಕ್ಕು ಪುಸ್ತಕವನ್ನು ಕಂಡು– "ಶರಣೆ"ನ್ನುವುದಲ್ಲದೆ ಮತ್ತೇನು ಮಾಡುವರು?

o o o

ಪತ್ರಿಕೋದ್ಯಮಿಗಳು ಶರಣೆಂದೊಡನೆಯೇ ಪತ್ರಿಕೆಗಳ ಪುಟಗಳನ್ನು ಆ ಸರ್ವಾಧಿಕಾರಿಗಳ ಪ್ರಶಂಸೆಗಳು ನುಗ್ಗುವುವೆಂದು ಹೇಳಬೇಕಾಗಿಲ್ಲ.

o o o

ಇಷ್ಟು ಮಾತ್ರವಲ್ಲ. ನಿರುದ್ಯೋಗ ಬಹಳೇ ವಿಶೇಷವಾಗಿರುವ ಈ ಕಾಲದಲ್ಲಿ ಕಲಿತು ಅಲೆದಾಡುವ ಬಡಯುವಕರಿಗೆ ಕಡಿಮೆಯೇ? ಸರ್ವಾಧಿಕಾರಿಗಳ ಜೇಬಿನಲ್ಲಿರುವ ರೂಪಾಯಿಗಳೊಳಗ ನಡೆಯುವ ತಿಕ್ಕಾಟದಿಂದ ಖಣ್ಣೆಂದು ಶಬ್ದವಾಗುವಾಗ ಅವರೆದೆಯು ಜುಮ್ಮೆನ್ನುತ್ತದೆ.

o o o

ಸರಿ. ಸರ್ವಾಧಿಕಾರಿಗಳನ್ನು ಏಕಕಂಠದಿಂದ ಹೊಗಳುವ ನೂರಾರು "His master's voice"ಗಳು ಕೂಡಲೆ ತಲೆದೋರುತ್ತವೆ. ಇದಕ್ಕಾಗಿ ಯುವಕರನ್ನು ದೂರಿ ಫಲವಿಲ್ಲ. ಅದವರ ಜೀವನೋಪಾಯ!

o ಕ o

ಹೀಗೆ ಸರ್ವಾಧಿಕಾರದ ಮಹಿಮೆಯಿಂದ ಕಾಂಗ್ರೆಸು ಅದಕ್ಕೆ ಬದ್ಧವಿರೋಧವಾಗಿದ್ದ ಹಲವಾರು ಪತ್ರಿಕೆಗಳನ್ನು ಮೆಚ್ಚಿಸಿ ಬಿಟ್ಟಿದೆ. (ಇದರ ಕೀರ್ತಿಯು ಮಾತ್ರ ಚೆಕ್ ಪುಸ್ತಕಕ್ಕೆ ಸಲ್ಲಲೇ ಬೇಕು.) ನೂರಾರು ಜನರನ್ನು ಸರ್ವಾಧಿಕಾರವು ಮತಾಂತರ ಗೊಳಿಸಿಬಿಟ್ಟಿದೆ!

o o o

ಸರ್ವಾಧಿಕಾರವೆಂದೊಡನೆಯೇ "ಚುನಾಯಿತ ಸದಸ್ಯರಿಗೆ ಹೀಗನ್ನುವುದೇ?" ಎಂಬ ಪ್ರಶ್ನೆಯು ಬಂದೇ ಬರುವುದೆನ್ನಿ. ಈ ಚುನಾವಣೆಯ ಕಥೆ ಬೇರೆಯೇ ಇದೆ.

o o o

ರಾಷ್ಟ್ರದ ಪ್ರಬಲ ಸಂಸ್ಥೆಯಾದ ಕಾಂಗ್ರೆಸನ್ನು ಉದಾಹರಣೆಯಾಗಿ ತೆಗೆದುಕೊಳ್ಳೋಣ. ನಾಲ್ಕಾಣೆ ಕಾಂಗ್ರೆಸ್ ಸದಸ್ಯರನ್ನು ಎಲ್ಲರಿಗೂ ಸೇರಿಸಲು ಸಾಧ್ಯವಿಲ್ಲ. ಕಾರಣ– ಎಲ್ಲರಲ್ಲಿಯೂ ಹಣವಿರುವುದಿಲ್ಲ.

o o o

ಸರಿ. ಸೀನಪ್ಪನು ಧನಿಕನೆಂದು ಭಾವಿಸೋಣ. ೧೦೦೦ ರೂಪಾಯಿ ಖರ್ಚು ಮಾಡಿದರೆ ೪೦೦೦ ನಾಲ್ಕಾಣೆ ಸದಸ್ಯರನ್ನು ಸೇರಿಸಬಹುದು. ನಾಲ್ಕಾಣೆ ಸದಸ್ಯರೆಂದು ಇವರನ್ನು ಕರೆಯುವುದರಲ್ಲಿ ತುಂಬಾ ಅರ್ಥವಿರಬಹುದು.

o o o

ಪ್ರಾಥಮಿಕ ಸದಸ್ಯರು ಸದಸ್ಯತನದ ಪತ್ರಿಕೆಗೆ ಸಹಿ ಹಾಕುವುದಲ್ಲದೆ ಮತ್ತೇನೆಲ್ಲಾ ಅದರಲ್ಲಿದೆಯೆಂದು ಯಾರಿಗಾದರೂ ಗೊತ್ತಿದೆಯೆ? ಕೊನೆಗೆ ಚುನಾವಣೆ ಬಂದರೆ ಹಣ ಕೊಟ್ಟವನೊಡನಲ್ಲವೇ ರಶೀದಿ! ಸೀನಪ್ಪನ ೧೦೦೦ ರೂಪ್ಯಾಕ್ರಯ ಬಾಳುವ ೪೦೦೦ ಸದಸ್ಯರು ೪೦೦೦ ಮತಗಳನ್ನು ಸೀನಪ್ಪನ ಪಕ್ಷಕ್ಕೆ ಕೊಡುತ್ತಾರೆ.

o o o

ಹೀಗಾದೊಡನೆಯೇ ಸೀನಪ್ಪನು "ಸರ್ವಾಧಿಕಾರಿ"ಯಾಗುವನೇ ಎಂದು ಕೇಳಬಹುದು. ಆ ಶಬ್ದವು ಮೆಚ್ಚದಿದ್ದರೆ "ಲೀಡರ್" ಎಂದೆನ್ನೋಣ. ಮುಂದೆ ಈ ಸೀನಪ್ಪನು ಹೇಳಿದಂತೆ ಕಾಂಗ್ರೆಸ್!

(೯ನೇ ಪುಟ ನೋಡಿರಿ)

# ಜಡೆಯು ಚಿರಾಯುವಾಗಲಿ!

ನಗೆಬರಹ. — 'ವಿಟ್ಟು'

'ಇದು ಹಿಟ್ಲರ್ ಯುಗ' ಎಂದು ಕೆಲವರು ಹೇಳಬಹುದು. 'ಅಲ್ಲಲ್ಲ ಇದು ಗಾಂಧಿಯುಗ' ಎಂದು ಇನ್ನು ಕೆಲವರೆನ್ನಬಹುದು. ನಾನು ಹೇಳುತ್ತೇನೆ, ಇದು 'ಕೂದಲು ಭಂಜಕರ ಯುಗ'. ನಾನು ಹೀಗೆ ಹೇಳಿದೆನೆಂದು ಹಿಟ್ಲರ್ ಕಡೆಯವರಾಗಲೀ ಗಾಂಧಿ ಭಕ್ತರಾಗಲೀ ನನ್ನೊಡನೆ ವಾದಕ್ಕಿಳಿಯುವ ಆಗತ್ಯವಿಲ್ಲ. ನನ್ನ ಕೂದಲು ಭಂಜಕರ ಪಂಗ್ತಿಯಲ್ಲಿ ನಿಮ್ಮ ಹಿಟ್ಲರ್ ಮತ್ತು ಗಾಂಧಿ--- ಇಬ್ಬರೂ ಇದ್ದಾರೆ. ಹಿಟ್ಲರನನ್ನು ನೋಡಿ,– ಇದಿರಾಳಿ ಹುಂಜವನ್ನು ಕಂಡೊಡನೆ ಮರಿಹುಂಜದ ತಲೆಗರಿ ನಿಗುರುತ್ತದಲ್ಲಾ-- ಹಾಗೆಯೇ ಸೋವಿಯೇಟರನ್ನು ಕಂಡು ನಿಗುರಿ ಮುಂಭಾಗದಲ್ಲಿ ನೆಟ್ಟಗೆ ನಿಂತ ಆ ಕೂದಲನ್ನಲ್ಲದೆ ಮಿಕ್ಕ ತಲೆಕೂದಲನ್ನೆಲ್ಲ ಕತ್ತರಿಸಿಕೊಂಡಿದ್ದಾನೆ ಇನ್ನು ಮೀಸೆಯಲ್ಲೆಷ್ಟು ಕೂದಲುಗಳಿವೆ? ಎರಡು ಸೊಳ್ಳೆಗಳ ಮಟ್ಟಕ್ಕೆ ಸರಿಯಾಗಿ ಎರಡು ಹಿಡಿ ಕೂದಲು ಮಾತ್ರ ಅಷ್ಟನ್ನಾದರೂ ಇಟ್ಟುಕೊಂಡದ್ದು ಕೂದಲಿನ ಮೇಲಿನ ಪ್ರೇಮದಿಂದ ಎಂದು ಭಾವಿಸಬೇಡಿ. ಅವನ ಬಾಯಿಯಿಂದ ಹೊರಡುವ ಮಾತುಗಳ ಕಲ್ಮಷದಿಂದ ಇಡೀ ಲೋಕದ ಆರೋಗ್ಯ ಹಾಳಾಗುತ್ತಿರುವುದನ್ನು ನಾವು ಕಣ್ಣಾರೆ ಕಾಣುತ್ತಿದೇವೆ. ಅದು ಇದ್ದಕ್ಕಿದ್ದಂತೆ ಹಿಟ್ಲರನ ಮೂಗಿನೊಳಗೆ ಹೋದರೆ ಆರೋಗ್ಯ ಹಾಳಾಗುವ ಮಾತು ಬಿಡಿ– ಆ ಕ್ಷಣವೇ ಪ್ರಾಣಾಪಾಯ ಸಂಭವಿಸುವ ಹಾಗಿದೆ. ಆ ಬಿಸಿ ಮಾತುಗಳನ್ನು ತಡೆದು ಕಲ್ಮಷವನ್ನು ಶೋಧಿಸಿ ತೆಗೆಯುವದಕ್ಕಾಗಿ ಮಾತ್ರ ಈ ಸೊಳ್ಳೆ ಮೀಸೆ. ಇನ್ನು ಗಾಂಧಿಯವರನ್ನು ನೋಡೋಣ. ಅಹಿಂಸಾಚಾರ್ಯರಾದ ಮಹಾತ್ಮಾ ಗಾಂಧಿಯವರು ಕೂದಲುಹಿಂಸೆ ಮಾಡುತ್ತಾರೆ. ಹಿಂಬದಿಯಲ್ಲಿರುವ ಎರಡೆಸಳು ಕೂದಲನ್ನು ಬಿಟ್ಟರೆ ಅವರ ಇಡೀ ತಲೆ ಹೊಸಮಡಕೆಯಂತೆ ಕಾಣುತ್ತದೆ. 'ಏನು ಗಾಂಧಿಯವರು ಹಿಂಸೆ ಮಾಡುವರೆಂದು ಬಿಟ್ಟೆಯಾ?' ಎಂದು ಗಾಂಧಿಭಕ್ತರು ನನ್ನನ್ನು ಗದರಿಸಬಹುದು. "ಕರೀಪೈರಿನಂತೆ ಕೂದಲು ಬೆಳೆಯಿಸಿಕೊಳ್ಳಲಿಕ್ಕೆ ಗಾಂಧಿಯವರ ಮೆದುಳಿನಲ್ಲಿ ಗೊಬ್ಬರದಂತಹ ತಪ್ಪು ಭಾವನೆಗಳಿಲ್ಲ. ಆದ್ದರಿಂದ ಅವರ ತಲೆಯಲ್ಲಿ ಈ ಪೈರು ಉಳಿಯುವದಿಲ್ಲ." ಎಂದು ಗಾಂಧಿ ಕಡೆಯವರಂದಾರು. ಒಪ್ಪಿಕೊಳ್ಳೋಣ. ಅವಕ್ಕನುಸಾರವಾಗಿ, ಉಳಿದಿರುವ ಆ ಎರಡು ಎಸಳು ಕೂದಲುಗಳಿಗೆ ಕೂಡ ಅನುಯಾಯಿಗಳು ತಾವಾಗಿ ತಂದು ಅವರ ತಲೆಯ ಒಂದು ಮೂಲೆಗೆ ಸೇರಿಸಿಡುವ ಗೊಬ್ಬರವೊಂದೇ ಆಹಾರವಲ್ಲದೆ, ಗಾಂಧಿಯವರು ಆ ಮಟ್ಟಿಗೆ ಸಂಪೂರ್ಣ ದರಿದ್ರರೆಂಬುದನ್ನು ಅಡ್ಡಿಯಿಲ್ಲದೆ ಹೌದೆನ್ನೋಣ. ಅಂತೂ ಹಿಟ್ಲರ್ ಮತ್ತು ಗಾಂಧಿಯವರಿಬ್ಬರೂ ಕೂದಲು ಭಂಜಕರೆಂಬುದು ನಿಜವಷ್ಟೆ. ಹಾಗಾದ ಮೇಲೆ ಇದು ಕೂದಲು ಭಂಜಕರ ಯುಗವೆನ್ನುವದಕ್ಕೇನು ಅಡ್ಡಿ? ನಾಯಕರ ಮಾತು ಹಾಗಿರಲಿ, ಸಾಮಾನ್ಯ ಜನರಾದರೂ ಕೂದಲಿನ ಪೋಷಣೆ ಮಾಡುವುದುಂಟೇ? ಅದೂ ಇಲ್ಲ. ತುಟಿಗಳ ಮೇಲೆ ಕೂದಲಂತೂ ಇಲ್ಲ, ತಲೆಯ ಕೂದಲು ಮೂರಿಂಚಿಗಿಂತ ಉದ್ದವಿಲ್ಲ. ಇನ್ನೆಲ್ಲಿ ಉಂಟೆಂದು ಹೇಳಲಿ ಕೂದಲು? ಜೇಬಲ್ಲಿ ಹುಡುಕಿದರೂ ಪ್ರಯೋಜನವಿಲ್ಲ, ಕ್ಷೌರದ ಸೆಲೂನುಗಳಿಗೇ ಹೋಗಬೇಕಾಯಿತು. ಹಿಂದಿನ ಯುಗಗಳಲ್ಲಿ ಲಂಕೆಯ ರಣಭೂಮಿ, ಕುರುಕ್ಷೇತ್ರ- ಮೊದಲಾದ ಯುದ್ಧರಂಗಗಳಲ್ಲಿ ಮಾತ್ರ ಕಾಣಬಹುದಾಗಿದ್ದ ರಾಶಿ ರಾಶಿ ಶಿರೋಭೂಷಣಗಳನ್ನು ಇಂದು ಬೀದಿಬೀದಿಯ ಸೆಲೂನುಗಳಲ್ಲಿ ಕಾಣುವಂತಾಗಿವೆ; ಹರಹರಾ!

ಹೋಗಲಿ, ಕೂದಲುಗಳಲ್ಲಿ ಅರೆವಾಸಿ ಹೋದ ಹಾಗಾಯಿತು. ಮಿಕ್ಕ ಅರ್ಧ ಸ್ತ್ರೀ ವರ್ಗದವರಲ್ಲುಂಟು ಅದಕ್ಕೇನೂ ಭಂಗ ಬಂದಿಲ್ಲವಲ್ಲ– ಆದ್ದರಿಂದ ಕೂದಲಿನ ಸಂಖ್ಯೆಯಲ್ಲಿ ಬಹುಭಾಗವು ಇನ್ನೂ ಇದೆಯೆಂಬ ಆಶೆಯೊಂದಿತ್ತು. ಅದರಲ್ಲೂ ನಿರಾಶೆಯಾಗುವ ಕಾಲ ಬರುತ್ತಿದೆ. ಸ್ತ್ರೀಯರ ಕೂದಲಿನಲ್ಲಿಯೂ ಅರ್ಧಪಾಲು ಮಾತ್ರ ಲೆಖ್ಖಕ್ಕೆ ಸಿಕ್ಕುತ್ತದೆ. ನೋಡಿ, ಹಿಂದೂ ಸ್ತ್ರೀಯರು ಪೂರ್ತಿ ಕೂದಲಿಟ್ಟು ಸೂಡಿ ಹಾಕಿಕೊಂಡೋ ಜಡೆ ಕಟ್ಟಿಕೊಂಡೋ ಇರುವ ಹೆಚ್ಚಿನ ಅವಧಿಯೆಂದರೆ ಇಪ್ಪತ್ತು ವರ್ಷ ಮಾತ್ರ. ಆ ಮೇಲೆ ಅವಳ ಗಂಡ ಆ ಕೂದಲ ಸೂಡಿಯೊಡನೆ ಪರ

ಲೋಕಕ್ಕೆ ಹೊಗಡುವ ಪದ್ಧತಿ ಈಗೀಗ ನಮ್ಮ ಸ್ತ್ರೀಯರು ಸುಧಾರಿಸಲು ತೊಡಗಿದ್ದಾರೆ. 'ತಲೆ ಸೂಡಿಯೆಂದರೆ ಗಂಡ ಕೊಟ್ಟದ್ದಲ್ಲ; ಅವನೊಟ್ಟಿಗೆ ಅದು ಹೋಗಬೇಕೆಂದಿಲ್ಲ" ಎಂದು ಮತ್ತೂ ಇಟ್ಟುಕೊಳ್ಳ ಹತ್ತಿದ್ದಾರೆ. ಇದೊಂದು ಆಶಾದಾಯಕ ಚಿಹ್ನೆಯೇನೋ ಹೌದು. ಆದರೆ ಅದರ ಹಿಂದಿನಿಂದಲೇ ಬರುತ್ತಿದೆಯಲ್ಲ-ಇನ್ನೊಂದು ಗಂಡಾಂತರ.



ಈ ಜಡೆ ತುಂಡಾಗುವ ಬದಲಿಗೆ ಕತ್ತರಿಯೇ ತುಂಡಾಗಬಾರದೇಕೆ?

ಈ ಸ್ತ್ರೀಯರು ಸುಧಾರಣೆಯಲ್ಲಿ ಇನ್ನಷ್ಟು ಮುಂದುವರಿದು, ಪಾಶ್ಚಾತ್ಯ ಸ್ತ್ರೀಯರಂತೆ ಕ್ರಾಪ್ ಮಾತ್ರ ಇಟ್ಟುಕೊಳ್ಳುವ ಫೇಶನಿಗಿಳಿಯ ಹತ್ತಿದ್ದಾರಲ್ಲ. ಕೇವಲ ಕೂದಲ ಪ್ರೇಮಿಯಾದ ನನ್ನ ಮಟ್ಟಿಗೆ ಹೇಳುವದಾದರೆ, ಗಂಡ ಸತ್ತನಂತರ ಪೂರಾ ಬೋಳಿಸುವದೂ ಒಂದೇ; ಈಗಲೇ ಅರ್ಧ ಕತ್ತರಿಸಿ ಇಡೀ ಆಯುಷ್ಯದ ವರೆಗೆ ಇಡುವದೂ ಒಂದೇ. ಈ ಎರಡು ಪದ್ಧತಿಗಳಿಂದಲೂ ಕೂದಲಿನ ಉದ್ದಳತೆಯಲ್ಲಿ ಅರ್ಧಕರ್ಧ ಮಾತ್ರ ಸಿಕ್ಕುತ್ತದೆ. ರಾಮ ರಾಮ! ಕಲಿಯುಗದ ಪ್ರಭಾವವೇ! ಕೂದಲಿನ ಮೇಲೇತಕಪ್ಪಾ (ಕ್ಷೌರಿಕನನ್ನು ಬಿಟ್ಟರೆ ಮಿಕ್ಕವರಿಗೆ) ಜನರಿಗಿಂಥಾ ದೃಷ್ಟಿ?

'ಕಲಿಯುಗದಲ್ಲಿ ಎಲ್ಲಾ ಹಾಳಾಗಲಿಕ್ಕುಂಟು' ಎಂದು ಶ್ರೀಕೃಷ್ಣ ಪರಮಾತ್ಮ ಅಂದೇ ಹೇಳಿದ್ದ. ಈಗ ಕಲಿಯುಗ ಅರ್ಧವಾಗಿರುವಾಗ ಅರ್ಧಕ್ಕರ್ಧ (ಕೂದಲು) ಹಾಳಾಗುವದನ್ನು ಕಾಣುತ್ತಿದ್ದೇವಲ್ಲ. ಇನ್ನು ಯುಗ ಪೂರ್ತಿಯಾಗುವಾಗ ಎಲ್ಲಾ ಹಾಳಾಗಲಿಕ್ಕುಂಟು! ಶ್ರೀಕೃಷ್ಣಾ! ಆಗಲೂ ಕಾಂಗ್ರೆಸ್ ಮಂತ್ರಿಮಂಡಲವಿದ್ದು ಪಾನನಿಷೇಧ ಕಾನೂನನ್ನು ವರ್ಷದಿಂದ ವರ್ಷಕ್ಕೆ ಜಾರಿ ಮಾಡುತ್ತಲೇ ಬಂದು ಅದಕ್ಕಾಗಿ ಮಡಕೆಗಳನ್ನು ಒಡೆಯುವಾಗ, ವ್ಯತ್ಯಾಸ ತಿಳಿಯದೆ ನಮ್ಮ ತಲೆಗೂ ಒಂದೆರಡು ಪೆಟ್ಟು ಬಿದ್ದರೆ ಅದಕ್ಕೆ ಹೊಣೆ ಯಾರು ಪರಮಾತ್ಮಾ? ದೇವಾ! ನೀನೇಕೆ ಈ ಅನ್ಯಾಯದ ನಿವಾರಣೆಗಾಗಿ ಇನ್ನೊಮ್ಮೆ ಅವತರಿಸಬಾರದು. ತ್ರೇತಾ, ದ್ವಾಪರಾ ಯುಗಗಳಲ್ಲಿ ಕೂದಲಿಗೆ ಕೈಯಿಕ್ಕಿದವರನ್ನು ಧ್ವಂಸಗೊಳಿಸುವದಕ್ಕಾಗಿಯೇ ಅವತಾರವೆತ್ತಿದವ ನೀನು. ಆದರೆ ಒಂದು ಮಾತು ನಿಜ. ಆ ಕಾಲದಲ್ಲಿ ಅನ್ಯಾಯವನ್ನು ನಿವಾರಿಸೆಂದು ನಿನ್ನಲ್ಲಿ ಮೊರೆಯಿಟ್ಟದ್ದರು. ಈ ಕಾಲದಲ್ಲಿ ನಿನ್ನನ್ನು ಸ್ತುತಿಸುವವರಿಲ್ಲ. ಆಮಂತ್ರಣವಿಲ್ಲದಲ್ಲಿ ಹೋಗಲಾರೆನೆಂದು ಹಟತೊಟ್ಟು ಕುಳಿತಿರುವಿಯೇನು? ನಾನೇನು ಮಾಡಲಿ—ನನಗೆ ಜಪ ಮಾಡುವ ವಿಧಾನವೇ ತಿಳಿಯದು. ಕಲಿಸುವವರು ಕೂಡಾ ಇಲ್ಲ. ಎಲ್ಲರೂ 'ಕ್ರಾಂತಿಯು ಚಿರಾಯುವಾಗಲಿ' ಎಂಬುದನ್ನೇ ಕಲಿಸುತ್ತಿದ್ದಾರೆ. ನಾನು ಅದನ್ನೇ ಒಂದಿಷ್ಟು ತಿದ್ದಿಕೊಂಡು 'ಜಡೆಯು ಚಿರಾಯುವಾಗಲಿ' ಎಂದೆ—ಕೇಳಿತೆ?

ಅಯ್ಯೋ! ನೋಡಿ, ಆ ತ್ರೇತಾಯುಗವೆಂದರೆ ಶ್ರೀ ರಾಮಚಂದ್ರನ ಯುಗ. ಶ್ರೀರಾಮ ಮತ್ತು ಸೀತಾ ಲಕ್ಷ್ಮಣರು ಪಂಚವಟಿಯಲ್ಲಿದ್ದರು. ಆಗಲೂ ಕೂದಲು ಭಂಜಕರು ಇದ್ದರೆನ್ನಿ. ರಾಮ ಲಕ್ಷ್ಮಣರು ಇಲ್ಲದ ವೇಳೆ ನೋಡಿ ರಾವಣ, ಸನ್ಯಾಸಿ ವೇಷ ಹಾಕಿಕೊಂಡು ಸೀತೆಯ ಪರ್ಣಕುಟೀರಕ್ಕೆ ಬಂದ. ಭಿಕ್ಷೆ ಕೊಡಲು ಬಂದ ಸೀತೆಯ ಜುಟ್ಟಿಗೆ ಕೈಹಾಕಿದ. ಹಾಕಿದ ಕೂಡಲೇ '. . . . ಬೇಡ ಬೇಡೆಂಬಂತೆ ಮರನಲ್ಲಾಡುತಿರ್ದುದು . . .'

ಗಿಡಮರಗಳು ಕೂಡ ಬೇಡ ಬೇಡವೆಂದು ಹೇಳಿದ್ದುವು. (ಆ ಮರಗಿಡಗಳ ಹೂವನ್ನು ಮುಡಿಯಬೇಕು ಅದೇ ಜುಟ್ಟು. ತಮಗೆ ಸಂಬಂಧವಿದ್ದ ಸ್ಥಳವನ್ನು ಇತರರು ಆಕ್ರಮಿಸುವದನ್ನು ಮರ ಗಿಡಗಳು ಕೂಡ ನಿಷೇಧಿಸಿದ್ದವು— ತ್ರೇತಾಯುಗದ ಮರಗಿಡಗಳಾಗಬಹುದು; ಕಲಿಯುಗದ ಬ್ರಿಟಿಷರು ಮತ್ತು ಫ್ರೆಂಚರು 'ಬೇಡ ಬೇಡ' ಎಂದಾದರೂ ಸಾವಲ್ಲಾಡುವ!) ಅಂತೂ ರಾವಣ ಸೀತೆಯನ್ನು ಕೊಂಡು ಹೋದ. ಆದರಿಂದಲೇ ಅವನ ಸಂತಾನ ನಿರ್ಮೂಲವಾಯಿತು!

ಆ ಮೇಲೆ ದ್ವಾಪರಾಯುಗ ಬಂತು. ಆಗ ಕೂದಲಿಗಿದ್ದಷ್ಟು ಪ್ರಾಮುಖ್ಯತೆ ಮತ್ತಾವುದಕ್ಕಿತ್ತು? ಇಡೀ ಭಾರತ ಯುದ್ಧವಾದುದು ಕೇವಲ ಕೂದಲಿಗಾಗಿ. ಧರ್ಮರಾಯ ಕೌರವನೊಡನೆ ಜೂಜಾಡಿ ಎಲ್ಲವನ್ನೂ ಸೋತ, ದ್ರೌಪದಿಯನ್ನೂ ಸೋತ. ದುಶ್ಶಾಸನ ಅವಳನ್ನು ಎಳೆಯಲು ಬಂದ. ಬಂದವನೇ ಎಷ್ಟು ಸಂತೈಸಿದರೂ ಕೇಳದೆ '....ತಪ್ಪಿದನಹಹ ಸಿರಿಮುಡಿಗೆ||' ಏನನಾಹುತ! ಅವಳ ತಲೆಮುಡಿಯನ್ನು ಬಿಚ್ಚಿ, ಕೂದಲನ್ನು ಹಿಡಿದು ತುಂಬಿದ ಸಭೆಗೆಳೆದು ತಂದ! ಆ ಕೂದಲೆಳೆಯಲ್ಲಿಯೇ ಭಾರತ ವೀರರ ಖಡ್ಗ ತೂಗಾಡಿ ಭಾರತಯುದ್ಧವಾಯಿತೆಂಬುದು ಎಲ್ಲರಿಗೂ ಗೊತ್ತಿದ್ದದ್ದೆ!

ಕೂದಲು ಭಂಜಕರು ಇದರಿಂದ ಪಾಠ ಕಲಿಯಬೇಕು ರಾವಣ, ದುಶ್ಶಾಸರನ್ನು ಧ್ವಂಸ ಮಾಡಿದಂತೆ ನಿಮ್ಮನ್ನು ಧ್ವಂಸ ಮಾಡಲು ರಾಮ ಭೀಮರಂತಹ ಗಂಡುಗಲಿಗಳು ಈ ಯುಗದಲ್ಲಿಲ್ಲದಿರಬಹುದು. ಆದರೆ, ಕೂದಲು ಹಿಡಿದು ಕತ್ತರಿಸುವ ಮೊದಲು ಭೀಮನನ್ನಲ್ಲವಾದರೂ ಆ ದ್ರೌಪದಿಯನ್ನೊಮ್ಮೆ ಸ್ಮರಿಸಿಕೊಳ್ಳಿ. ದುಶ್ಶಾಸನ ಸೆರಗನ್ನೆಳೆದೊಡನೆಯೇ ತುಂಬಿದ ಸಭೆಯಲ್ಲಿ ಅವಳ ಮಾನಭಂಗವಾಗುತಿತ್ತು. ಆ ಸಮಯದಲ್ಲಿ ಅವಳ ಮಾನವನ್ನು ಕಾಪಾಡಿದುದು ಯಾರು ಗೊತ್ತುಂಟೆ? ನೀವು ಕತ್ತರಿಸುವ ಆ ಕೂದಲು ಏನು "ಶ್ರೀ ಕೃಷ್ಣ" ಎನ್ನುತ್ತೀರಾ? ಶ್ರೀಕೃಷ್ಣ ಆ ಕೆಲಸಕ್ಕೆ ಕೈ ಹಾಕಿದುದು ಎರಡು ಮಿನಿಟು ತಡವಾಗಿ. ಅವ ಸೆರಗೆಳೆಯುತ್ತಾನೆಂದು ದ್ರೌಪದಿಗೂ ಗೊತ್ತಿರಲಿಲ್ಲ, ಕೃಷ್ಣನಿಗೂ ಗೊತ್ತಿರಲಿಲ್ಲ. ಎಳೆದೊಡನೆಯೇ ದ್ರೌಪದಿ ಎದೆಯನ್ನು ಮುಚ್ಚಿಕೊಂಡದ್ದು ಕೂದಲಿನಿಂದ, ತಿಳಿಯಿತೆ? ಆ ಮೇಲೆ ಮತ್ತೂ ಎಳೆಯಲು ತೊಡಗಿದ ದುಶ್ಶಾಸ. ಉಪಾಯವಿಲ್ಲದೆ ದ್ರೌಪದಿ ಕೃಷ್ಣನಿಗೆ ಮೊರೆಯಿಟ್ಟಳು. ಕೂದಲು ದೇಹವನ್ನೆಲ್ಲಾ ಮುಚ್ಚುವಷ್ಟಿರುತ್ತಿದ್ದರೆ ದ್ರೌಪದಿಗೆ ಅನಂತರವೂ ಕೃಷ್ಣನ ಹಂಗೇ ಬೇಡವಿತ್ತು!

ಇದು ದ್ವಾಪರಾಯುಗದ ಕತೆಯಾಯಿತು. ಈ ಯುಗದಲ್ಲಿ ಹಾಗಾಗುವಂತಿಲ್ಲ. ಆದ್ದರಿಂದ ಸ್ತ್ರೀಯರು ಕೂದಲು ಇಡುವುದರಿಂದ ಉಪಯೋಗವಿಲ್ಲ'- ಎಂದು ಭಾವಿಸಬೇಡಿ. ಕೇಳಿ, ಮೊನ್ನೆ ಮದುವೆಯಾದ ಶ್ರೀಧರ ಮತ್ತು ನಳಿನಿ ಗಾಳಿ ಸೇವನೆಗೆ ಮೈದಾನಿಗೆ ಹೋದವರು, ಒಂದೆರಡು ಘಂಟೆ ಕುಳಿತು ತಿರುಗಿ ಬರುತ್ತಿದ್ದರು. ಹಿಂದಿನಿಂದ ಬರುತ್ತಿದ್ದ ನಳಿನಿ ಶ್ರೀಧರನ ಹಿಂಭಾಗ ನೋಡಿ ಗೊಳ್ಳೆಂದು ನಕ್ಕಳು. ಶ್ರೀಧರ ತನ್ನ ಹಿಂಭಾಗವನ್ನು ತಾನು ನೋಡುತ್ತಾನೆ-ವಸ್ತ್ರತುಂಬಾಮಣ್ಣು! 'ಮೊದಲು ನಿನ್ನ ಬೆನ್ನುನೋಡಿಕೋ' ಎಂದ. 'ನೋಡಿ' ಎಂದು ನಳಿನಿ ತಿರುಗಿ ನಿಂತಳು.—ಒಂದೇ ಒಂದು ಚೂರು ಮಣ್ಣಿಲ್ಲ! ಕಾರಣವೇನು ಗೊತ್ತೆ? ಅವಳ ಜಡೆಯ ತುದಿಯ ಗೊಂಡೆ ಆ ಮಣ್ಣನ್ನೆಲ್ಲಾ ಜಾಡಿಸಿಬಿಟ್ಟಿತ್ತು! ನಮ್ಮ ಮೈದಾನಿನ ಸಂಜೆಯ ಕೂಟವೆಂದರೆ ಕೌರವನ ಒಡ್ಡೋಲಗಕ್ಕಿಂತ ಯಾವ ಬಗೆಯಲ್ಲಿಯೂ ಕಡಿಮೆಯದಲ್ಲ. ಅಲ್ಲಿ, ಹಿಂಭಾಗದಲ್ಲೆಲ್ಲಾ ಮಣ್ಣು ಹತ್ತಿಸಿಕೊಂಡು ನಳಿನಿ ಬರುತ್ತಿದ್ದರೆ ದ್ರೌಪದಿಗಾದಂತೆಯೇ ಮರ್ಯಾದೆಗೆ ಕುಂದು ಬರುತ್ತಿತ್ತು. ಅಂತೂ ಯಾವ ಯುಗದಲ್ಲಾದರೂ ಹೆಂಗಸರ ಮರ್ಯಾದೆ ಕಾಪಾಡಬೇಕು ಆ ಜಡೆ, ಅಥವಾ ಸೂಡಿ-ಅಂತೂ ತಲೆಕೂದಲು!

ಆದರೇನು ಮಾಡಲಿ? ನವಯುವತಿಯರಿಗೆ ಸಮಾನತೆ ಬೇಕೆಂಬ ಆಶೆ ಹುಟ್ಟಿದೆಯಲ್ಲ. ಉಡುಗೆ ತೊಡಿಗೆ, ನಡೆನುಡಿ, ಎಲ್ಲದರಲ್ಲಿಯೂ ಪುರುಷರಂತೆಯೇ ಆಗಬೇಕೆಂಬುದಕ್ಕಾಗಿ ಕೂದಲಿನ ಮೇಲೂ ಕಣ್ಣಿಟ್ಟಿದ್ದಾರಲ್ಲ! ಹೌದು, ಅವರಿಗೆ ಅತಿರೇಕ ಕಷ್ಟವುಂಟೆಂಬುದನ್ನು ನಾನು ಒಪ್ಪುತ್ತೇನೆ. 'ಬಡ ನಡು ವಿನಾ ಬಾಲೆ ಬಳುಕಿದಳು' ಎಂದು ಹಿಂದಿನ ಕವಿಗಳು ಆಗಾಗ ಅವರ ಬನ್ನವನ್ನು ಬಣ್ಣಿಸಿದ್ದಾರೆ. ನಾನೂ ಅದು ಹೌದೆನ್ನುವವ. ನಡುವು ಬಡಕಲಾಗಿರುವಾಗ ತಲೆಸೂಡಿಯಂತಹ ಭಾರವಾದ ಹೊರೆಗಳು ನಡುವಿನ ಮೇಲಿದ್ದರೆ ಬಳುಕದೇನು ಮಾಡಬಲ್ಲರು? ಆದರೆ ಜಡೆ ಹಾಕಿದರೆ ಅದನ್ನು ನಡು ಮಾತ್ರವಲ್ಲ, ತಲೆಯಿಂದ ಹಿಡಿದು ಮೊಣಕಾಲ ವರೆಗಿನ ಎಲ್ಲಾ ಅಂಗಗಳೂ ಆಧರಿಸುತ್ತವೆ. ಆದ್ದರಿಂದ ಜಡೆಯಿರಲಿ, ಮೊಣಕಾಲ ವರೆಗೂ ಇರಲಿ. 'ಜಡೆಯು ಚಿರಾಯುವಾಗಲಿ!; ಕತ್ತರಿಯೇ ತುಂಡಾಗಿ ಬೀಳಲಿ!'

---

ಬೇಗನೆ ಬರುತ್ತದೆ (೧)

# ರೇಡಿಯೋದಿಂದ ಆರೋಗ್ಯ

[ಈ ವಿಭಾಗದಲ್ಲಿ ಮುಂದೆ ಆಗಬಹುದಾದ ಕೆಲವು ವೈಜ್ಞಾನಿಕ ವೈಚಿತ್ರ್ಯಗಳು ವಿವರಿಸಲ್ಪಡುವುವು.]

●

ಇಂದು ನೀವು ಉಮಾಶಶಿಯ ಸಂಗೀತ ಕೇಳಲಿಕ್ಕಾಗಿ ರೇಡಿಯೋದ ಬಳಿಗೆ ಬರಬಹುದು. ನಾಳೆ ಶೈತ್ಯವನ್ನು ಹೋಗಲಾಡಿಸುವುದಕ್ಕಾಗಿ ನೀವು ಅದರ ಬಳಿಸಾರಬಹುದು.

ಡಯತರ್ಮಿ ಎಂಬುದನ್ನು ಪ್ರಸಿದ್ಧ ವೈಜ್ಞಾನಿಕರೊಬ್ಬರು ಹೀಗೆ ವಿವರಿಸಿದ್ದಾರೆ. '...ಶರೀರದೊಳಗೆ ವಿದ್ಯುಚ್ಛಕ್ತಿಯನ್ನು ಬಿಡುವುದೇ ಡಯತರ್ಮಿ' ಈ ವಿದ್ಯುಚ್ಛಕ್ತಿಯು ಶರೀರದೊಳಗೆ ಹೋದೊಡನೆಯೇ ಸರ್ವಸಾಮಾನ್ಯವಾಗಿ ಎಲ್ಲಾ ಭಾಗಗಳನ್ನೂ ಬಿಸಿ ಮಾಡುತ್ತದೆ.

ತಜ್ಞರು ಪ್ರತಿಯೊಂದು ರಕ್ತಕಣಕ್ಕೂ ಒಂದು ವೇವ್‌ಲೆಂಗ್ತ್ (Wavelength) ಇದೆಯೆಂದು ಹೇಳುತ್ತಾರೆ. ಒಬ್ಬನು ಅಸ್ವಸ್ಥದಲ್ಲಿದ್ದೊಡನೆಯೇ ಅವನ 'ವೇವ್ ಲೆಂಗ್ತ್' ಕಡಿಮೆಯಾಗುತ್ತದೆ. ನಿಮಗೆ ಅಸೌಖ್ಯವಾದೊಡನೆಯೆ ವೈದ್ಯರು ನಿಮ್ಮೊಡನೆ ಹಲವಾರು ಪ್ರಶ್ನೆಗಳನ್ನು ಕೇಳದೆ ರೇಡಿಯೊದ ಸಹಾಯದಿಂದ ನಿಮ್ಮ ವೇವ್‌ಲೆಂಗ್ತ್ ಎಷ್ಟೆಂದು ನೋಡುವರು. ಕ್ರಿಮಿಗಳ ವೇವ್‌ಲೆಂಗ್ತ್ ಎಷ್ಟೆಂಬುದನ್ನು ತಿಳಿದರೆ ಮದ್ದು ಕೊಡುವುದು ಅತ್ಯಂತ ಸುಲಭವಾಗುತ್ತದೆ.

**ನಿಗೂಢ ಪೆಟ್ಟಿಗೆ.**

ಅಮೇರಿಕದಲ್ಲಿ ಕೆಲವು ವರುಷಗಳ ಹಿಂದೆ ಅಬ್ರಹಾಮ್ ಎಂಬವನು ಒಂದು ಮುಚ್ಚಿದ ಪೆಟ್ಟಿಗೆಯನ್ನು ಕಂಡು ಹಿಡಿದನು. ಈ ನಿಗೂಢ ಪೆಟ್ಟಿಗೆಯು ರೋಗಿಯ ಆರೋಗ್ಯ ಪರಿಸ್ಥಿತಿಯನ್ನು ಕಂಡು ಹಿಡಿಯುವುದೆಂದು ಅಬ್ರಹಾಮನು ಹೇಳಿದರೂ ಅದು ಮುಚ್ಚಿದ್ದುದರಿಂದ ಯಾರೂ ಅದನ್ನು ನಂಬಲಿಲ್ಲ.

ಹೀಗೆ ಪ್ರಾರಂಭವಾದ ಈ ಯಂತ್ರದಲ್ಲಿ ಹಲವು ಸುಧಾರಣೆಗಳಾಗಿ ಈಗ ಅದೆಷ್ಟೋ ಮಂದಿ ಅದರ ಮಹತ್ಪ್ರಯೋಜನಗಳನ್ನು ಪಡೆಯುತ್ತಿದ್ದಾರೆ.

ಇತ್ತೀಚೆಗೆ ಒಬ್ಬಾಕೆ ಹಲವು ಸಾವಿರ ಮಂದಿ ಡಾಕ್ಟರರ ಮದ್ದಿನಿಂದ ಪ್ರಯೋಜನ ಹೊಂದದೆ ಒಬ್ಬ ಡಯತರ್ಮಿಸ್ಟರ ಬಳಿಗೆ ಹೋಗಿ ವಿದ್ಯುಚ್ಛಕ್ತಿಯನ್ನು ತನ್ನ ದೇಹದೊಳಗೆ ಪ್ರವೇಶಿಸುವಂತೆ ಮಾಡಿ ಕಠಿನ ರೋಗದಿಂದ ದೂರವಾದಳು. ಡಾಕ್ಟರರು ಅವಳ ರೋಗದ ವೇವ್ ಲೆಂಗ್ತನ್ನು ಕಂಡು ಹಿಡಿದು ವಿದ್ಯುಚ್ಛಕ್ತಿಯ ಚಿಕಿತ್ಸೆ ಮಾಡಿದರು. ನಾಳೆ ನೀವು ಕೂಡಾ ನಿಮ್ಮ ಅಸ್ವಸ್ಥತೆಯನ್ನು ಹೋಗಲಾಡಿಸುವುದಕ್ಕಾಗಿ ರೇಡಿಯೋ ಬಳಿ ಸಾರಲೂಬಹುದು.

# ನೊಬೆಲ್ ಬಹುಮಾನ ಎಂದರೇನು?

ಆಲ್ಫ್ರೆಡ್ ಬರ್ನಾರ್ಡ್ ನೊಬೆಲ್ ಎಂಬ ವೈಜ್ಞಾನಿಕನು. ಈ ಬಹುಮಾನದ ಸಂಸ್ಥಾಪಕನು. ೧೮೬೭ರಲ್ಲಿ ಅವನು ಸ್ಫೋಟಕ ದ್ರವ್ಯಗಳನ್ನು ಕಂಡು ಹಿಡಿದು ಅಪಾರ ಸಂಪತ್ತನ್ನು ಸಂಪಾದಿಸಿದನು.

ಅವನು ಐದು ನೊಬೆಲ್ ಬಹುಮಾನಗಳ ಏರ್ಪಾಡು ಮಾಡಿದ್ದಾನೆ. ಪ್ರತಿಯೊಂದು ಬಹುಮಾನಕ್ಕೆ ೭೫೦೦ ಪವನುಗಳು ಕೊಡಲ್ಪಡುತ್ತವೆ. ಪದಾರ್ಥ ವಿಜ್ಞಾನ ಶಾಸ್ತ್ರ, ರಸಾಯನ ಶಾಸ್ತ್ರ, ದೇಹ ಶಾಸ್ತ್ರ, ವೈದ್ಯ ಶಾಸ್ತ್ರ ಸಾಹಿತ್ಯದ ನಾಲ್ಕು ಬಹುಮಾನಗಳು ಪ್ರತಿ ವರುಷ ಕೊಡಲ್ಪಡುತ್ತವೆ. ಐದನೆಯ ಬಹುಮಾನವು ಶಾಂತಿ ಬಹುಮಾನ. ಯಾವನು ಜಗತ್ತಿನಲ್ಲಿ ಶಾಂತಿ ಸಾಧನೆಗಾಗಿ ತುಂಬಾ ಪ್ರಯತ್ನಿಸುತ್ತಾನೋ ಅವನಿಗೆ ಈ ಬಹುಮಾನವು ಕೊಡಲ್ಪಡುತ್ತದೆ

ಈ ಬಹುಮಾನಕ್ಕೆ ಲಿಂಗಭೇದಗಳಿಲ್ಲ. ಶಾಂತಿ ಬಹುಮಾನವನ್ನು ನೋರ್ವೆಯ ವಿಧಾಯಕ ಸಭೆಯು (ಸ್ಟಾರ್ತಿಂಗ್ ಎಂದು ಇದರ ಹೆಸರು) ಕೊಡುತ್ತದೆ. ಮಿಕ್ಕುಳಿದ ನಾಲ್ಕು ಬಹುಮಾನಗಳನ್ನು ಸ್ವೀಡಿಷ್ ಫೆಕಲ್ಟಿ ಆಫ್ ಮೆಡಿಸಿನ್ ಸಂಘದವರು ಕೊಡುತ್ತಾರೆ. ನೊಬೆಲ್ ಮಹಾಶಯನ ವಾರ್ಷಿಕೋತ್ಸವ ಕಾಲದಲ್ಲಿ ಅಂದರೆ ಪ್ರತಿ ವರುಷದ ದಶಂಬರ ೧೦ರಂದು ಈ ಬಹುಮಾನವು ಕೊಡಲ್ಪಡುತ್ತದೆ. ಆಲ್ಫ್ರೆಡ್ ನೊಬೆಲ್ ಈ ಬಹುಮಾನಕ್ಕಾಗಿ ಬಿಟ್ಟುಕೊಟ್ಟ ಹಣದ ಬಡ್ಡಿಯಿಂದ ಈ ಬಹುಮಾನವು ಕೊಡಲ್ಪಡುತ್ತದೆ. ಬ್ರಿಟಿಷ್ ಜನರ ಪೈಕಿ ರಡ್ಯಾರ್ಡ್ ಕಿಪ್ಲಿಂಗ್, ಜಾರ್ಜ್ ಬರ್ನಾರ್ಡ್ ಷಾ, ಸರ್. ಜೆ ಥಾಮ್ಸನ್, ಲಾರ್ಡ್ ರುತರ್ ಫೋರ್ಡ್, ಸರ್. ರೊನಾಲ್ಡ್ ರೋಸ್, ಮತ್ತು ಸರ್. ಆಸ್ಟೆನ್ ಚೇಂಬರ್ಲೇನ್‌ರವರಿಗೆ (ಶಾಂತಿ ಬಹುಮಾನ) ನೊಬೆಲ್ ಬಹುಮಾನಗಳು ಕೊಡಲ್ಪಟ್ಟಿವೆ. ಭಾರತದಲ್ಲಿ ಡಾ. ರವೀಂದ್ರನಾಥ ಟಾಗೋರ್, ಇವರು ಸಾಹಿತ್ಯಕ್ಕಾಗಿಯೂ ಸರ್. ಸಿ ವಿ ರಾಮನ್‌ರವರು ಪದಾರ್ಥ ವಿಜ್ಞಾನ ಶಾಸ್ತ್ರಕ್ಕಾಗಿಯೂ ಈ ಬಹುಮಾನವನ್ನು ಪಡೆದಿದ್ದಾರೆ.

# "ಅಂತರಂಗೀಯ"

"ದಂಪತಿಗಳು ಪರಸ್ಪರ ಸಂಬಂಧವಿರುವ ಒಂದು ವಸ್ತುವನ್ನು ಕಂಡು ಬೇಸರಿಸಿದರೆ ಅವರ ದಾಂಪತ್ಯವು ಯಶಸ್ವಿಯಾಗಲಿಕ್ಕಿಲ್ಲ" ವೆನ್ನುತ್ತಾರೊಬ್ಬ ಬರೆಹಗಾರರು.

ಆ ವಸ್ತುವು ಪ್ರಾಯಶಃ ದಂಪತಿಗಳ ಭಾವಚಿತ್ರವಾಗಿರಬಹುದು.

* * *

ವೇಷ ಪಲ್ಲಟನ ಸ್ಪರ್ಧೆಯೊಂದರಲ್ಲಿ ಕಪ್ಪೆಯ ವೇಷ ಹಾಕಿದವನು ಪ್ರವೇಶ ಧನವನ್ನು ಕೊಡದಿದುದಕ್ಕೆ ಅವನನ್ನು ಒಳಗೆ ಹೋಗಲು ಬಿಡಲಿಲ್ಲವಂತೆ.

ಪ್ರಾಯಶಃ ಅವನು ಕಪ್ಪೆಯಂತೆ ಹಾರಬಹುದೆಂದು ಅವರು ನಿರೀಕ್ಷಿಸಿರಬಹುದು.

* * *

ಧಾರವಾಡದಲ್ಲಿ ಒಬ್ಬ ಹುಡುಗ ಹದಿನೆರಡು ಡಜನು ಕಿತ್ತಳೆ ಹಣ್ಣುಗಳನ್ನು ತಿಂದನಂತೆ.

ಆದರೆ ಅದರಿಂದ ಪ್ರಯೋಜನವಾಗಲಿಲ್ಲ- ಕಾರಣ ಸಂಜೆಗೆ ಡಾಕ್ಟರರು ಮನೆಯ ಬಳಿ ಬಂದರಂತೆ.

* * *

ಮೊಟ್ಟೆಯೊಳಗಿನ ದ್ರವ ಪದಾರ್ಥವನ್ನು ಹಾಕುವರೆ ನವೀನ ಪಾತ್ರೆಗಳನ್ನು ಕಂಡು ಹಿಡಿದಿರುವರಂತೆ.

ಆದರೆ ಹೇಂಟೆಗಳು ಇನ್ನೂ ಚಿಪ್ಪುಗಳನ್ನು ಪಯೋಗಿಸುತ್ತಿವೆ.

* * *

"ಸಮತಾವಾದೀ ಧುರೀಣರು ಬಂದು ಕೆಲಸಗಾರರ ಸಂಘಗಳನ್ನು ಸ್ಥಾಪಿಸಿದರು" ಕನ್ನಡ ವಾರ ಪತ್ರಿಕೆಯೊಂದರ ವಾರ್ತೆ.

ಸದ್ಯದಲ್ಲಿಯೇ ಮುಷ್ಕರ ಹೂಡುವ ನಿರ್ಣಯವಾಗಬಹುದೆಂದು ನಿರೀಕ್ಷಿಸಲಾಗಿದೆಯೆಂದು ಅದರಲ್ಲಿ ಬರೆದಿರಲಿಲ್ಲ!

* * *

"ಮಹಾತ್ಮಾಜಿಯರು ಅಹಿಂಸಾತ್ಮಕ ಸೈನ್ಯವೊಂದನ್ನು ಸಿದ್ಧಗೊಳಿಸುತ್ತಿದ್ದಾರೆ" —ವಾರ್ತೆ.

ತಖಲೀ ಚರಕ ಧಾರಿಗಳಾದ ಸೈನಿಕರನ್ನು ಸ್ಪೈನ್ ಸರಕಾರದ ಪರವಾಗಿ ಹೋರಾಡಲು ಕಳುಹಿಸುವರೇ ಎಂಬ ಯೋಚನೆಚಯುಂಟಾಗಲಾರಂಭಿಸಿದೆ.

* * *

"ಬ್ರಿಟಿಷರ ವಿಶ್ವಾಸಘಾತಕತನ" --ಪತ್ರಿಕೆಯ ಶಿರೋನಾಮೆ.

ವಿಶ್ವಾಸಪಾಲನೆ ಮಾಡಿದ್ದೆಂದು?

* * *

"ಕರ್ನಾಟಕದಲ್ಲಿ ೬೦ ಲಕ್ಷ ಕಾಂಗ್ರೆಸ್ ಸದಸ್ಯರು!" ಪತ್ರಿಕೆಯ ಶಿರೋನಾಮೆ.

ಎಷ್ಟು ಮಂದಿ ಧನಿಕರು ಹಣ ವ್ಯಯ ಮಾಡಿದ್ದಾರೆ?

* * *

"ಕರ್ನಲ್ ಮ್ಯೂರ್ ಹೆಡ್ ರವರು ಸಂಯುಕ್ತ ಪ್ರಾಂತ್ಯಕ್ಕೆ ತೆರಳುವರು"— ವಾರ್ತೆ.

ಪ್ರಾಯಶಃ ಲಂಡನ್ ಪತ್ರಿಕೆಗಳಂದಿರುವಂತೆ "ಹಿಂದುಳಿದಿರುವ ಸಂಯುಕ್ತ ಪ್ರಾಂತ್ಯ"ದ ಉದ್ಧಾರ ಕಾರ್ಯಕ್ಕಾಗಿರಬಹುದು!

* * *

"ಭಾರತದ, ಏಕೆ, ಜಗತ್ತಿನ ಸರ್ವ ಸಂಕಟಗಳಿಗೆ ಆರ್ಥಿಕ ಪ್ರಶ್ನೆಯೇ ಮೂಲ ಕಾರಣವಾಗಿದೆ" ಯೆಂದು ಸರ್ ಚಿಮನಲಾಲ್ ಸೆಟಲವಾಡರು ಮುಂಬಯಿಯಲ್ಲಿ ಹೇಳಿದರು.

ಹದ ಪಕ್ಷೀಯರೂ ಸಮತಾವಾದಿಗಳನ್ನು ಸಮರ್ಥಿಸುವುದೆ?

---

## ನನಗರಿಯದು, ನಿಮಗೆ-



ಮುಂಬಾಯಿಯಲ್ಲಿ ಹಲ್ಲುಗಳಿವೆಯೇ ?

---

# ಜಗತ್ತಿನ ಅಂಚೆ ಚೀಟುಗಳು

## * * * * ಕೋಟಿಗಟ್ಟಲೆ ಜನರ ಅಡ್ಡಕಸಬು * * * *

**ಇಂದಿನ ಒಂದಾಣೆಯ ಚೀಟು ಸಾವಿರಾರು ರೂಪಾಯಿ ಬೆಲೆಬಾಳಬಹುದು.**

> **ಅಂಚೆ ಚೀಟುಗಳನ್ನು ಸಂಗ್ರಹಿಸುವುದು ಮಕ್ಕಳ ಹುಚ್ಚಾಟವಲ್ಲ. ದಿವಂಗತ ಐದನೆ ಜಾರ್ಜರು ಚೀಟು ಸಂಗ್ರಾಹಕರಲ್ಲಿ ಅತ್ಯಂತ ಉತ್ಸಾಹಿಗಳಾಗಿದ್ದರು. ಅಮೇರಿಕದ ಅಧ್ಯಕ್ಷ ರೂಸ್‌ವೆಲ್ಟರು ಈಗಲೂ ಚೀಟು ಸಂಗ್ರಾಹ ಮಾಡುತ್ತಿದ್ದಾರೆ.**

**ಅಂ**ಚೆಚೀಟುಗಳನ್ನು ಸಂಗ್ರಹಿಸುವುದು ಸಾವಿರಾರು ಜನರ ಅಡ್ಡಕಸುಬಾಗಿ ಪರಿಣಮಿಸಿದೆ. ನೂರಾರು ಅಂಚೆಚೀಟುಗಳನ್ನು ಸಂಗ್ರಹಿಸುವುದೆಂದರೆ ಅದೊಂದು ಕಲಾ ಸಂಗ್ರಹವೆಂದೇ ಹೇಳಬೇಕಾಗಿದೆ. ಕಾರಣ— ವಿವಿಧ ರಾಷ್ಟ್ರಗಳ ಚೀಟುಗಳು ವಿವಿಧ ರೀತಿಯಲ್ಲಿರುವುದಲ್ಲದೆ ಹೆಚ್ಚಿನವುಗಳು ಕಲಾಪೂರ್ಣವಾಗಿವೆ.

### ಆಸ್ಟ್ರಿಯದ ವಿಚಿತ್ರ ಚೀಟುಗಳು

ಜಗತ್ತಿನ ಎಲ್ಲಾ ರಾಷ್ಟ್ರಗಳ ಚೀಟುಗಳನ್ನು ಸಂಗ್ರಹಿಸಿದರೆ ಸುಮಾರು ೫೫೦,೦೦೦ ವಿಧದ ಚೀಟುಗಳಿವೆಯೆಂದು ಸ್ಪಷ್ಟವಾಗಬಹುದು. **ಇವುಗಳಲ್ಲಿ ಅತ್ಯಂತ ವಿಚಿತ್ರವಾದೊಂದು ಚೀಟು ಇತ್ತೀಚೆಗೆ ಹೊರಗೆ ಬಂದಿದೆ.**

ಆಸ್ಟ್ರಿಯದ ಮಾಜಿ ಚಾನ್ಸಲರರಾದ ಕರ್ಟ್‌ವೊನ್ ಶೂಸ್ನಿಗ್ಗರು ಅಲ್ಲಿ ನಡೆದ ಚುನಾವಣೆಯ ಮೊದಲು ಹಿಟ್ಲರನ ಧಾಳಿಯನ್ನು ತಡೆದು ಯಶಸ್ವಿಯಾಗಬಹುದೆಂಬ ನಿರೀಕ್ಷೆಯಿಂದ ವಿಜಯದ ಚಿಹ್ನೆಯಂತಿರುವ ಚೀಟುಗಳನ್ನು ಮುಂದಾಗಿ ಮುದ್ರಿಸುವ ಏರ್ಪಾಡು ಮಾಡಿದ್ದರು. ಆದರೆ ಅವರ ನಿರೀಕ್ಷೆಯೊಂದಾಯಿತು, ನಡೆದುದು ಮತ್ತೊಂದಾಯಿತು. ಹಿಟ್ಲರನು ಆ ಚೀಟಿಗಳನ್ನು ಧ್ವಂಸಮಾಡಿಸಿರುವುದರಿಂದ ಈಗ ಹತ್ತು ಹನ್ನೆರಡು ಚೀಟುಗಳು ಮಾತ್ರ ಉಳಿದಿವೆಯೆಂದು ತಿಳಿಯಲಾಗಿದೆ.

ಆ ಚೀಟಿನಲ್ಲಿ ಹೀಗೆ ಬರೆಯಲ್ಪಾಗಿದೆಯಂತೆ: ‘ಯೋಗ್ಯರೀತಿಯಲ್ಲಿ ಜನ್ಮ ಭೂಮಿಯ ಸೇವೆ ಮಾಡು, ಇಲ್ಲವೆ ನಡಿ.’ ಇನ್ನೊಂದು ವಿಧದ ಚೀಟಿಯಲ್ಲಿ ‘ನಮ ಬಲವೇ ಶಾಂತಿ’ ಯೆಂದು ಬರೆಯಲ್ಪಟ್ಟದೆಯಂತೆ.

### ಅಂಚೆ ಚೀಟಿನಿಂದಲೆ ಕಂದಾಯ

**ಒಂದು ವರುಷದಲ್ಲಿ ಬ್ರಿಟಿಷ್ ಪೋಸ್ಟ್ ಆಫೀಸು ಸುಮಾರು** ೩೭,೦೦೦,೦೦೦ ಪವನುಗಳಷ್ಟು ಬೆಲೆ ಬಾಳುವ ಚೀಟುಗಳನ್ನು ವಿಕ್ರಯಿಸುತ್ತಿದೆ. ಸೈಂಟ್ ಹೆಲೆನಾ ನಾರ್‌ಫೋಕ್, ಕೋಕ್ಸ್ ದ್ವೀಪ, ಫಾಕ್‌ಲೇಂಡ್, ಗಿಲ್ಬರ್ಟ್, ಟರ್ಕ್ಸ್ ಮತ್ತು ಕೈಕೋಸ್ ಮೊದಲಾದ ದ್ವೀಪಗಳು ತಮ್ಮ ಕಂದಾಯದ ಹೆಚ್ಚಿನಂಶವನ್ನು ಈ ಚೀಟುಗಳ ವಿಕ್ರಯದಿಂದಲೇ ಸಂಗ್ರಹಿಸುತ್ತವೆ. ಜಗತ್ತಿನ ಎಲ್ಲೆಡೆಗಳಲ್ಲಿಯೂ ಚೀಟುಗಳ ಸಂಗ್ರಾಹಕರಿರುವುದರಿಂದ ಆ ದ್ವೀಪಗಳಿಗೆ ತುಂಬಾ ಹಣವಾಗುತ್ತದೆ. ದೊಡ್ಡ ರಾಷ್ಟ್ರಗಳು ಕೂಡಾ ಸುಂದರವಾದ ಚೀಟುಗಳನ್ನು ಮಾಡುವುದರಿಂದ ಸಿಗುವ ಲಾಭವೆಷ್ಟೆಂದು ಮನಗಂಡಿವೆ. ಫ್ರೆಂಚ್ ವಸಾಹತುಗಳ ಅಂಚೆ ಚೀಟುಗಳು ಬಹಳ ಸುಂದರವಾಗಿವೆ. ಆ ಚೀಟುಗಳಲ್ಲಿ ಅಲ್ಲಿಯ ಮುಖ್ಯ ಕೈಗಾರಿಕೆಗೆ ಸಂಬಾಧಪಟ್ಟ ಚಿತ್ರಗಳು ಮುದ್ರಿಸಲ್ಪಡುತ್ತವೆ. ಆಸ್ಟ್ರೇಲಿಯವು ಕೂಡಾ ಅನೇಕ ವಿಧದ ಸುಂದರ ಚೀಟುಗಳನ್ನು ಪ್ರಕಟಿಸಿದೆ. ಆರನೇ ಜಾರ್ಜರ ಕಾಲದ ಹೊಸ ಚೀಟುಗಳಲ್ಲಿ ಆಸ್ಟ್ರೇಲಿಯದ ನೈಸರ್ಗಿಕ ಸೌಂದರ್ಯದ ವಿವಿಧ ದೃಶ್ಯಗಳು ಮುದ್ರಿಸಲ್ಪಟ್ಟವೆ.

ಜಗತ್ತಿನ ರಾಷ್ಟ್ರಗಳು ಅಂಚೆ ಚೀಟಿನ ಚರಿತ್ರೆಯಲ್ಲಿ ಕೆಲವು ಬದಲಾವಣೆಗಳನ್ನು ಮಾಡಿರುವಾಗ ಭಾರತವು ಸುಮ್ಮನೆ ಕುಳಿತಿಲ್ಲ. ಮೊದಲು ರಾಜರ ತಲೆಯು ಮಾತ್ರ

ಮುದ್ರಿಸಲ್ಪಡುತ್ತಿತ್ತು. ೧೯೩೫ರ ರಜತೋತ್ಸವ ಮತ್ತು ೧೯೩೧ರ ನವಧಿಲ್ಲಿಯ ಪ್ರವೇಶೋತ್ಸವ ಕಾಲಗಳಲ್ಲಿ ಮಾತ್ರ ಬೇರೆ ಚೀಟುಗಳು ಮುದ್ರಿಸಲ್ಪಟ್ಟವೆ. ಹಳೆ ಕ್ರಮವನ್ನೇ ಅನುಸರಿಸಿಕೊಂಡು ಬರುವುದರಿಂದ ಪ್ರಯೋಜನವಿಲ್ಲವೆಂದು ಇತ್ತೀಚೆಗೆ ಕೆಲವು ಬದಲಾವಣೆಗಳನ್ನು ಮಾಡಿರುತ್ತಾರೆ. ಆರನೇ ಜಾರ್ಜರ ಹಲವು ಚೀಟುಗಳು ಈಗ ಹೊರಬಂದಿವೆ. ಬ್ರಹ್ಮದೇಶದಲ್ಲಿ ಹೊಸ ಚೀಟುಗಳಾಗಲಿಲ್ಲ. ಹಲವಾರು ವಿಧದ ಚಿತ್ರಗಳನ್ನು ಕಲಾವಿದರು ಸರಕಾರಕ್ಕೊಪ್ಪಿಸಿದರೂ ಅಲ್ಲಿ ಹಳೆಯ ಚೀಟುಗಳೇ ಜಾರಿಯಲ್ಲಿವೆ.

### ಚಾರಿತ್ರಿಕ ಅಂಚೆಚೀಟುಗಳು

ಚರಿತ್ರೆಯ ಎಷ್ಟೋ ಘಟನೆಗಳು ಚೀಟುಗಳ ಮೇಲೆ ಮುದ್ರಿಸಲ್ಪಡುತ್ತವೆ. ೧೯೨೫ರಲ್ಲಿ ಹಂಗೇರಿಯವು ಅಲ್ಲಿಯ ವಿವಿಧ ಆಟಗಳ ಚಿತ್ರಗಳನ್ನು ಚೀಟುಗಳಲ್ಲಿ ಮುದ್ರಿಸಿತು. ಜರ್ಮನಿ, ಯುನೈಟೆಡ್ ಸ್ಟೇಟ್ಸ್, ಹಾಲೆಂಡ್ ಮೊದಲಾದುವುಗಳು ಒಲಿಯಂಪಿಕ್ ಆಟದ ಚಿತ್ರಗಳನ್ನು ತಮ್ಮ ಚೀಟುಗಳಲ್ಲಿ ಮುದ್ರಿಸಿದುವು. ಅಮೇರಿಕದ ಚೀಟುಗಳಲ್ಲಿ ಆ ಖಂಡವನ್ನು ಶೋಧಿಸಿದ ಕೊಲಂಬಸನಿಗೆ ಒಂದು ಸ್ಥಾನವು ಕೊಡಲ್ಪಟ್ಟದೆ. ೧೯೩೫ರ ಭಾರತದ ರಜತೋತ್ಸವ ಕಾಲದ ಚೀಟುಗಳಲ್ಲಿ ಪ್ರಾಚೀನ ಕಾಲದ ದೇವಸ್ಥಾನ ಮತ್ತು ಮಸೀದಿಗಳು ಚಿತ್ರಿಸಲ್ಪಟ್ಟವು. ಯುರೋಪು ಮತ್ತು ಅಮೇರಿಕದ ಚೀಟುಗಳಲ್ಲಿ ಜರ್ಮನಿಯ ಸ್ವಸ್ತಿಕಾ, ಕ್ರಾಸ್ ಮೊದಲಾದ ಚಿಹ್ನೆಗಳಿವೆ.

### ಸಂಸ್ಥಾನಗಳ ಚೀಟುಗಳು

ಭಾರತೀಯ ಸಂಸ್ಥಾನಗಳ ಚೀಟುಗಳು ಕೂಡಾ ಸಾಮಾನ್ಯ ಮಟ್ಟಿಗೆ ಸುಂದರವಾಗಿವೆ. ಹೆಚ್ಚಿನವುಗಳಲ್ಲಿ ಕಿರೀಟ ಮೊದಲಾದುವುಗಳಿರುವುದಿದ್ದರೂ ಮುದ್ರಣದ ದೋಷದಿಂದ ಅವುಗಳು ಮನೋಹರವಾಗಿ ಕಾಣುವುದಿಲ್ಲ. ಜಯಪುರ ಸಂಸ್ಥಾನದ ಚೀಟು ಇತರ ಸಂಸ್ಥಾನದವುಗಳಿಂತ ಚೆನ್ನಾಗಿದೆ. ನೇಪಾಳದ ಚೀಟುಗಳಲ್ಲಿ ಅಲ್ಲಿಯ ಪ್ರಾಕೃತಿಕ ದೃಶ್ಯಗಳೂ, ಧಾರ್ಮಿಕ ಚಿತ್ರಗಳೂ ಮುದ್ರಿಸಲ್ಪಟ್ಟವೆ.



ಈ ಚಿತ್ರದಲ್ಲಿ ಐರ್‌ಲೇಂಡ್, ಕೆನಡಾ, ಇಜಿಪ್ಟ್ ಮೊದಲಾದ ದೇಶಗಳ ಅಂಚೆ ಚೀಟುಗಳನ್ನು ಕಾಣಬಹುದು.

### ಅಡ್ಡ ಕಸುಬು.

ಕಳೆದ ಮಹಾ ಯುದ್ಧದ ಬಳಿಕ ಚೀಟುಗಳ ಸಂಖ್ಯೆಯು ಅಸಂಖ್ಯಾತವಾಗಿರುವುದರಿಂದ ಹೆಚ್ಚಿನವರು ಅಪೂರ್ವವಾದವುಗಳನ್ನು ಮಾತ್ರ ಸಂಗ್ರಹಿಸುತ್ತಾರೆ. ಯಾವುದಾದರೂ ಒಂದು ಚೀಟು ವಿಚಿತ್ರವಾಗಿದ್ದರೆ ಅದಕ್ಕೆ ಸ್ವಲ್ಪ ಸಮಯದಲ್ಲಿಯೇ ತುಂಬಾ ಬೆಲೆಸಿಗುತ್ತದೆ. ಈ ಅಡ್ಡ ಕಸುಬಿಗೆ ಹೆಚ್ಚು ಖರ್ಚಿಲ್ಲದಿದ್ದರೂ, ಮಾಡುವುದಿದ್ದರೆ ಎಷ್ಟು ವ್ಯಯಿಸಿದರೂ ಸಾಕಾಗುವುದಿಲ್ಲ. ಹಲವಾರು ವರುಷಗಳ ಹಿಂದೆ ಒಂದೇಆಣೆ ಬೆಲೆಯಿದ್ದ ಅಂಚೆಚೀಟು ಇಂದು ಸಾವಿರಾರು ರೂಪಾಯಿ ಬೆಲೆಬಾಳುವುದುಂಟು.

ಕೆಲವು ನಿದರ್ಶನಗಳನ್ನು ಕೊಡುವುದಿದ್ದರೆ:—

ವಿಕ್ಟೋರಿಯಾ ರಾಣಿಯ ಕಾಲದ ಮೊರಿಶಿಯಸಿನ ಒಂದಾಣೆ ಚೀಟಿಗೆ ಈಗ ರೂ. ೩೯,೦೦೦ ಬೆಲೆ.

. . . . .

ಅದೇ ಕಾಲದ ಎರಡಾಣೆ ಚೀಟಿಗೆ ರೂ.೩೨,೫೦೦ ಬೆಲೆ.

. . . . .

ಹವಾಯಿನ್ ದ್ವೀಪದ ಎರಡುಸೆಂಟ್ ಚೀಟಿಗೆ ಈಗ ಕ್ರಯ ರೂ. ೯,೧೦೦.

. . . . .

ವಿಕ್ಟೋರಿಯಾ ರಾಣಿಯ ತಲೆ ಕೆಳಗಾದ ಚೀಟಿಗೆ ಈಗ ರೂ. ೫೮೫೦ ಕ್ರಯ.

. . . . .

ವಿಕ್ಟೋರಿಯಾ ರಾಣಿಯ ಕಾಲದ ಪಶ್ಚಿಮಾಸ್ಟ್ರೇಲಿಯದ ನಾಲ್ಕಾಣೆ ಸ್ಟಾಂಪಿಗೆ ರೂ. ೩,೯೦೦ ಕ್ರಯ.

. . . . .

ಸ್ವೀಡೆನಿನ ಮೂರು ಶಿಲಿಂಗಿನ ಒಂದು ಅಂಚೆ ಚೀಟಿನ ಬಣ್ಣವು ಹಳದಿಯಾಗಿರುವುದಕ್ಕಾಗಿ ಅದಕ್ಕೆ ಈಗ ರೂ. ೯೧,೦೦೦ ಕ್ರಯ. ಜಗತ್ತಿನಲ್ಲಿ ಅತ್ಯಂತ ಬೆಲೆಬಾಳುವ

ಹಳೆ ಚೀಟೆಂದರೆ ಐದನೆ ಜಾರ್ಜರ ಸಂಗ್ರಹದಲ್ಲಿರುವ ೧೮೫೦ರ ಬ್ರಿಟಿಷ್ ಗಯಾನದ ಎರಡು ಸೆಂಟಿನ ಸ್ಟಾಂಪು. ಮೊದಲು ಒಬ್ಬ ವಿದ್ಯಾರ್ಥಿಯು ಇದೇ ಚೀಟಿಯನ್ನು ೬ ಆಣೆಗಳಿಗೆ ಮಾರಿದರೂ ಈಗ ಅದು ೭೦೦೦ ಗಿನಿಯಷ್ಟು ಬೆಲೆ ಬಾಳುತ್ತದೆ. ಇಡೀ ಜಗತ್ತಿನಲ್ಲಿ ಅತ್ಯಪೂರ್ವವಾದ ಚೀಟಿಯೆಂದರೆ ೧೯೩೫ರಲ್ಲಿ ಹೊರಡಿಸಿದ ಫ್ರೆಂಚ್ ಟಾಗೊ. ಲೋಕದಲ್ಲಿರುವ ಬೆಲೆಯಿಲ್ಲದ ಚೀಟುಗಳ ಕೆಲವು ಉದಾಹರಣೆಗಳಿವು.



ಅಮೇರಿಕದ ಅಧ್ಯಕ್ಷ ರೂಸ್‌ವೆಲ್ಟರು
ಅಂಚೆ ಚೀಟು ಸಂಗ್ರಹಿಸುವ ಉತ್ಸಾಹಿಗಳಲ್ಲೊಬ್ಬರು.

೮

**ಮಹತ್ವದ ಪ್ರಯೋಜನ.**

ಅಂಚೆ ಚೀಟುಗಳ ಸಂಗ್ರಹದಿಂದ ಬೆಲೆಯಲ್ಲದೆ ತುಂಬಾ ಜ್ಞಾನ ಸಂಗ್ರಹವಾಗುತ್ತದೆ. ವಿವಿಧ ರಾಷ್ಟ್ರಗಳ ಚೀಟುಗಳ ಚರಿತ್ರೆಯನ್ನು ಕಲಿಯುವುದರಿಂದ ಭೂಗೋಲ ಶಾಸ್ತ್ರದ ಜ್ಞಾನವನ್ನು ಪಡೆದಂತಾಗುತ್ತದೆ. ನೂರಾರು ವಿದೇಶೀಯ ಶಬ್ದಗಳ ಮತ್ತು ಅನೇಕ ದೇಶಗಳ ಹೆಸರನ್ನು ತಿಳಿದಂತಾಗುವುದು. ಜಗತ್ತಿನ ವಿವಿಧ ರಾಷ್ಟ್ರಗಳಲ್ಲಿ ಯಾವ ನಾಣ್ಯಗಳು ಪ್ರಚಾರದಲ್ಲಿವೆಯೆಂಬ ಅರಿವುಂಟಾಗುತ್ತದೆ.

ಚಾರಿತ್ರಿಕ ವಿಚಾರಗಳೂ, ಬೇರೆ ಬೇರೆ ರಾಷ್ಟ್ರಗಳ ಜ್ಞಾನವೂ ಉಂಟಾದಂತಾಗುತ್ತದೆ. ಸಾಮಾನ್ಯ ತಿಳುವಳಿಕೆಯು ಈ ಅಡ್ಡ ಕಸುಬಿನಿಂದ ಹೆಚ್ಚುವುದಲ್ಲದೆ ವಿಶಾಲ ಮನೋವೃತ್ತಿಗೆ ಇದೇ ಪ್ರಥಮ ಸೋಪಾನವೆನ್ನಬಹುದು. ಚೀಟು ಸಂಗ್ರಹದ ಈ ಕಲೆಯು ಎಲ್ಲಾ ದೇಶಗಳ ಸ್ತ್ರೀಪುರುಷರನ್ನು ಈಗಾಗಲೆ ಆಕರ್ಷಿಸಿದೆ. ದಿವಂಗತ ಐದನೆಯ ಜಾರ್ಜರು ಜಗತ್ತಿನ ದೊಡ್ಡ ಚೀಟು ಸಂಗ್ರಾಹಕರಾಗಿದ್ದರು. ಅವರ ಬ್ರಿಟಿಷ್ ವಸಾಹತುಗಳ ಸಂಗ್ರಹಕ್ಕೆ ಸರಿಯಾದ ಸಂಗ್ರಹವು ಜಗತ್ತಿನಲ್ಲಿ ಬೇರೊಂದಿಲ್ಲ. ಅಮೇರಿಕದ ಯುನೈಟೆಡ್ ಸ್ಟೇಟ್ಸಿನ ಅಧ್ಯಕ್ಷರಾದ ರೂಸ್‌ವೆಲ್ಟರವರು ಚೀಟಿ ಸಂಗ್ರಹದಲ್ಲಿ ತುಂಬಾ ಉತ್ಸುಕತೆಯುಳ್ಳವರು. ಬ್ರಿಟಿಷ್ ಮ್ಯೂಸಿಯಮಿನಲ್ಲಿ ಹಲವು ತರದ ಚೀಟುಗಳು ಪ್ರದರ್ಶಿಸಲ್ಪಡುತ್ತವೆ. ಅಲ್ಲಿರುವ ಚೀಟಿಗಳ ಬೆಲೆಯು ಸುಮಾರು ೧೦೦.೦೦೦ ಪವನುಗಳಿಗಿಂತಲೂ ಮಿಕ್ಕಿದೆ. ಇಂಗ್ಲೆಂಡಿನ ಎಷ್ಟೋ ಮಂದಿ ಸಿರಿವಂತರು ಈ ಕಲೆಗೆ ಮರುಳಾಗಿದ್ದಾರೆ.

---

## ವಚನಾಮೃತ

'ವಿಶ್ವಾಸದಿಂದ ವಿಶ್ವಾಸ ಕೆಡುವುದು.'

........

'ನಿರ್ಮಲ ಮನವೇ ತೊಂದರೆಯ ಪ್ರವಾಹ'

........

'ಪರೋಪಕಾರವೇ ಒಡತನದ ಆರಂಭ'

........

'ಸತ್ಯಾತ್ಮರಾದ ಮೂರ್ಖರಿಗೆ ಲೋಕವೆಲ್ಲ ಒಳ್ಳೆದು'

........

'ಗೆಳೆಯರಿದ್ದ ಬಾಳು ಹಾಳು'




ಯುರೋಪಿನ ಬೇರೆ ಬೇರೆ ದೇಶಗಳ ಮಂತ್ರಿಮಂಡಲಗಳು ಆಗಾಗ ಸಭೆ ಕೂಡುತ್ತಿವೆ-ಅಗಲುತ್ತಿವೆ!

❀❀

ತಮ್ಮ ಸೈನ್ಯಗಳನ್ನು ಎಲ್ಲಿ, ಹೇಗೆ, ನಿಲ್ಲಿಸುವದೆಂಬುದೇ ಅವೆಲ್ಲವುಗಳ ಮುಖ್ಯ ಯೋಚನೆ.

❀❀

ಈಗಿನ ದಿನಗಳಲ್ಲಿ ಸೇರುವ ಎಲ್ಲಾ ಮಂಡಲಗಳಿಗೂ, ಅದೇ ಯೋಚನೆಯಿರಬೇಕೆಂಬ ಪ್ರಕೃತಿ ನಿರ್ಬಂಧವಿದ್ದಂತೆ ಕಾಣುತ್ತದೆ.

❀❀

ಆದ್ದರಿಂದ ನಮ್ಮ ಕಾಂಗ್ರೆಸ್ ಮುಖ್ಯ ಮಂಡಲದ ಮುಂದೆಯೂ 'ಸೈನ್ಯ ನಿಲ್ಲಿಸುವ' ಯೋಚನೆ ಬಂದಿದೆ.

❀❀

ನಮ್ಮ ಸೈನ್ಯವೆಂದರೆ 'ಅಹಿಂಸಾತ್ಮಕ ರಾಷ್ಟ್ರೀಯ ಸೈನ್ಯ'. ಮಹಾತ್ಮಾ ಗಾಂಧಿಯವರು ಅದರ ನಿರ್ಮಾಣ ಕರ್ತರು.

❀❀

'ಈ ಅಹಿಂಸಾತ್ಮಕ ಸೈನ್ಯದಿಂದ ನಾವು ವಿರೋಧಿಗಳನ್ನು ಜಯಿಸಬಲ್ಲೆವು' ಎಂದು ಗಾಂಧಿಯವರನ್ನುತ್ತಾರೆ. ಇನ್ನು ಜಯಿಸುವದೆಲ್ಲಿ ಬಾಕಿಯಿದೆ?

❀❀

ಈ ಕಾಲದಲ್ಲಿ ಕೂಡಾ ಬಾಂಬು ಹಿಡಿದು ನಮಗಿದಿರಾಗುವ ವೈರಿಗಳು ಕಾಣಿಸುವದಿಲ್ಲ. 'ನಾವವರನ್ನು ಇಷ್ಟರಲ್ಲೆ ಜಯಿಸಿಯಾಗಿದೆ'. ಎಂದು ನಮ್ಮಷ್ಟಕ್ಕೆ ಭಾವಿಸಿಕೊಂಡಲ್ಲಿ ಅಲ್ಲವೆನ್ನುವವರಾರು?

❀❀

'ಚೀನ, ಅಬಿಸೀನಿಯಾ, ಝೆಕೋಸ್ಲೋವೇಕಿಯಾದಲ್ಲಿ ಹಿಂಸಾತ್ಮಕ ಸೈನ್ಯವಿದ್ದು ಗೆಲ್ಲಲಿಕ್ಕಾಗಲಿಲ್ಲ. ನನ್ನ ಅಹಿಂಸಾತ್ಮಕ ಸೈನ್ಯಕ್ಕೊಮ್ಮೆ ಸಂದರ್ಭವನ್ನು ಕೊಡಲಾರಿರಾ?' ಎಂದು ಗಾಂಧಿಯವರು ಬೇಡುತ್ತಾರೆ.

❀❀

ಸೈನ್ಯವಿದ್ದವರು ಇಚ್ಛೆಯಿದ್ದಲ್ಲಿ ಕೊಂಡು ಹೋಗಿ ಹೊಗಿಸಬೇಕು; ಬೇಡುವುದಲ್ಲ. ಬೇಡಿ ದೊರೆಯದುದನ್ನು ದೊರಕಿಸಿ ಕೊಳ್ಳುವದಕ್ಕಾಗಿ ಸೈನ್ಯ-ಸೈನ್ಯವಿದ್ದೂ ಬೇಡುವನೆಂದರೆ ಹಿಟ್ಲರನು ನೆಗಾಡಲಾರನೆ?

❀❀

ಹೋಗಲಿ, ಈ ಅಹಿಂಸಾತ್ಮಕ ಸೈನ್ಯಕ್ಕೊಮ್ಮೆ ಸಂದರ್ಭ ಕೊಡುವ. ಆಗ ಜಪಾನಾಗಲೀ, ಇಟಲಿಯಾಗಲೀ ಹಿಂದುಸ್ಥಾನದ ಮೇಲೆ ಬೊಂಬು ಹಾಕಲು ಬಂತೆಂದು ಭಾವಿಸೋಣ. ಕೂಡಲೇ ಈ ಸೈನ್ಯವು ಎದ್ದು ನಿಲ್ಲುವದು.

❀❀

ಚೀನದಲ್ಲಿ ಜಪಾನರು, ಅಬಿಸೀನಿಯದಲ್ಲಿ ಇಟಲಿಯಾನರು, ನಿಶ್ಶಸ್ತ್ರರಾದ ಜನರನ್ನು ಹುಡುಕಿಕೊಂಡು ಹೋಗಿ ಬಾಂಬು ಹಾಕಬೇಕಿತ್ತು.

❀❀

ಹಿಂದೀಯರೆಲ್ಲಾ ಅಹಿಂಸಾತ್ಮಕ ಸೈನ್ಯರೂಪದಿಂದ ಸರಾಸರಿ ಇದಿರಿಗೆ ಬಂದು ನಿಂತಲ್ಲಿ ವಿರೋಧಿಗೆ ನಮ್ಮನ್ನು ಹುಡುಕುವ ತೊಂದರೆ ಕೂಡಾ ಇಲ್ಲ. ನಮ್ಮ ಪರಿಶುದ್ಧ ಅಹಿಂಸಾತ್ಮಕ ವಿಧಾನವನ್ನು ನಾವು ಲೋಕಕ್ಕೆ ತೋರಿಸಿದಂತಾಗುವದು!

❀❀

ಬಾಂಬು ಬೀಳುವಾಗ ಓಡಿ ಹೋಗಿ ತಪ್ಪಿಸಿಕೊಳ್ಳುವದೊಂದೇ ರಕ್ಷಣೋಪಾಯವೆಂದು ಹಿಂದೀಯರು ತಿಳಿದ ಕೊಂಡಿದ್ದರು. ಹೀಗೆ ಮಾಡಿದಲ್ಲಿ ಅಹಿಂಸಾತ್ಮಕ ಸೈನಿಕ ಶಿಸ್ತಿಗೆ ವಿರೋಧವಾಗುತ್ತದೆಂಬುದನ್ನು ಈ ಮೂಲಕ ಜಗಜ್ಜಾಹೀರು ಮಾಡಲಾಗಿದೆ.

❀❀

ಅಂಥವರ ಮೇಲೆ ಸೈನಿಕ ಶಿಸ್ತು ಜಾರಿಯಾಗಬಹುದು. ಆ ಶಿಸ್ತು ಅಹಿಂಸಾತ್ಮಕವಾಗಿರುವದರಿಂದ, ಹಿಂಸಾಪ್ರಿಯ ಯುದ್ಧ ಮನೋವೃತ್ತಿಯವರು ವೈರಿಗಳ ಬಾಂಬಿನ ಬಾಯಿಗೆ ಬಿದ್ದಾರಲ್ಲದೆ ಈ ಶಿಸ್ತಿನ ಬಾಯಿಗೆ ಬೀಳಲಾರರು!

❀❀

ಮತ್ತೊಂದು ಆಶೆಯಿದೆ. ಈವರೆಗಿನ ವಿಮಾನ, ಬಾಂಬುಗಳೆಲ್ಲಾ, ವಿರೋಧಿಗಳ ಪೆಟ್ಟನ್ನು ತಡೆಯುವ ವಿಧಾನಗಳನ್ನೊಳಗೊಂಡು ರಚಿಸಲ್ಪಟ್ಟವುಗಳು. ಅಹಿಂಸಾತ್ಮಕ ವಿರೋಧಿಗೆಂದು ಈವರೆಗೆ ಒಂದು ವಿಮಾನವೂ ತಯಾರಾದುದಿಲ್ಲ!

❀❀

ಅದಕ್ಕಾಗಿ ತಯಾರಿಸಿದ ವಿಮಾನವನ್ನು ಇದಕ್ಕಾಗಿ ಉಪಯೋಗಿಸಿದರೆ, ಇಂಜಿನು ಹಾಳಾಗುವದಂತೂ ಖಂಡಿತ!

❀❀

ಹೀಗೆ ಮಹಾತ್ಮಾಗಾಂಧಿಯವರ ಅಹಿಂಸಾತ್ಮಕ ಸೈನ್ಯಕ್ಕಿರುವಷ್ಟು ಜಯದ ಅನುಕೂಲತೆ ಹಿಟ್ಲರನ ಸೈನ್ಯಕ್ಕಿಲ್ಲ.

— ದೂಮು.

# ಕನ್ನಡ ಸಾಹಿತ್ಯದಲ್ಲಿ ಹಾಸ್ಯ

## ಶ್ರೀ. ಅ. ನ. ಕೃಷ್ಣರಾಯರ ಅಭಿಪ್ರಾಯ

ಶ್ರೀ. ಅ. ನ. ಕೃಷ್ಣರಾಯರು ಸಾಹಿತ್ಯ ಪರಿಷತ್ತಿನಲ್ಲಿ ಹಾಸ್ಯದ ಕುರಿತು ಮಾಡಿದ ಭಾಷಣವು ಗಣನೀಯವಾಗಿದೆ. ಕನ್ನಡ ಸಾಹಿತ್ಯದಲ್ಲಿ ಹಾಸ್ಯದ ಕುರಿತು ಮಾತಾಡುತ್ತಾ ಅವರು ಹೀಗೆ ಅಭಿಪ್ರಾಯ ಪಟ್ಟರು: 'ನಮ್ಮ ಸಾಹಿತ್ಯದಲ್ಲಿ ಸಾಕಷ್ಟು ಹಾಸ್ಯವಿಲ್ಲ. ಧರ್ಮಕ್ಕೆ ಹೆಚ್ಚು ಗಮನ ಕೊಟ್ಟಿರುವುದೇ ಇದಕ್ಕೆ ಮುಖ್ಯ



ಶ್ರೀ. ಕೋಟ ಶಿವರಾಮ ಕಾರಾಂತರು.

ಕಾರಣ. ಈಗೀಗ ಪ್ರಪಂಚದಲ್ಲಿ, ಜೀವನದಲ್ಲಿ ಆಸಕ್ತಿ ಹೆಚ್ಚುತ್ತಿದೆ. ಉತ್ತಮ ರೀತಿಯಲ್ಲಿ ಸರಿಯಾಗಿ ಹಾಸ್ಯವನ್ನು ಪ್ರತಿಪಾದಿಸುವುದೂ ಕಷ್ಟ. ಅನುಭವಿಸಿ ಆನಂದಿಸುವುದೂ ಅಷ್ಟೇ ಕಷ್ಟ. ಅದಕ್ಕೆ ಒಳ್ಳೆಯ ಸಂಸ್ಕಾರ ಬೇಕು.'

ಹಾಸ್ಯ ಜೀವನಕ್ಕೆ ಅಂಟಿಕೊಂಡು ಜೀವನದೊಡನೆ ಹೆಣೆದುಕೊಂಡು ಬೆಳೆದು ಬಂದಿದೆ. ಶೃಂಗಾರ, ಹಾಸ್ಯ, ಇಲ್ಲದೆ ಯಾವ ಬಾಳೂ ಇರಲಾರದು. ಜೀವನಕ್ಕೂ ಸಾಹಿತ್ಯಕ್ಕೂ ಅತಿ ಹತ್ತಿರದ ಸಂಬಂಧವಿರುವದರಿಂದ ಹಾಸ್ಯಕ್ಕೆ ಸಾಹಿತ್ಯದಲ್ಲಿಯೂ ಎಡೆಯುಂಟಾಯಿತು.

ಹಾಸ್ಯಕ್ಕೂ ಒಂದು ಶಾಸ್ತ್ರವಿದೆ. ಶಾಸ್ತ್ರ ದೃಷ್ಟಿಯಿಂದ ಇದನ್ನು ನೋಡಬೇಕು. ಹಾಸ್ಯದ ಸ್ವರೂಪವೇನು? ಅದರ ಹುಟ್ಟು ಎಲ್ಲಿ? ಅದರ ಚರಿತ್ರೆಯೇನು? ಎಂದು ನಾನಾ ರೀತಿಯಿಂದ ವಿಚಾರ ಮಾಡಬಹುದು.

ಜೀವನವನ್ನು ಸಾಮಾನ್ಯವಾಗಿ ಕಾಣದೆ ಸದಾ ಪರಿಚಿತವಲ್ಲದ ಬೇರೊಂದು ರೀತಿಯಿಂದ ನೋಡಿದರೆ, ಅಸಾಧಾರಣವಾದ ಸಂದರ್ಭ ಪರಿಸ್ಥಿತಿಗಳಲ್ಲಿ ಕಂಡರೆ, ಹೊಂದಿಕೆಯಿಲ್ಲದ ವಿಷಮ ವಿಕಟ ವಿಕಾರ ದೃಶ್ಯಗಳನ್ನು ಕಂಡರೆ ನಗು ಬರುತ್ತದೆ. ನಡೆನುಡಿಗಳಲ್ಲಿ, ಬುದ್ಧಿ ಭಾವನೆಗಳಲ್ಲಿ, ವ್ಯಕ್ತಿ ಸಂಬಂಧಗಳಲ್ಲಿ ನಡೆಯುವ ಸಂಗತಿಗಳಲ್ಲಿ ಯಾವುದರಲ್ಲಿಯೇ ಆಗಲಿ-ಸಾಮಾನ್ಯ ಜೀವನಕ್ಕೆ ಹೊರಗಾಗಿ ಕಾಣುವಾಗ ಹಾಸ್ಯ ತೋರುತ್ತದೆ.

ಸರ್ವಜ್ಞಕವಿ.

'ಕತ್ತೆ ಕಿರಿಚಿದಡಲ್ಲಿ ತೊತ್ತು
ಹಾಡಿದೊಡಲ್ಲಿ
ಮತ್ತೆ ಕುಲರಸಿಕನಿರುವಲ್ಲಿ ಕಡು
ನಗಯ
ಹುತ್ತ ಕಾಣಯ್ಯ ಸರ್ವಜ್ಞ'

ಎಂದು ಸೂಕ್ಷ್ಮವಾಗಿ ಹಾಸ್ಯ ಸ್ವರೂಪವನ್ನು ನಿರೂಪಿಸಿದ್ದಾನೆ. ಮೊದಲನೆಯವೆರಡು ಅಸಂಸ್ಕೃತರಿಗೆ ತೋರುವ ಹಾಸ್ಯ. ಸಂಸ್ಕೃತರಿಗೆ ರಸಿಕರಿಗೆ ತೋರುವುದೇ ಬೇರೆ.

ಸಾಮಾನ್ಯರ ಹಾಸ್ಯ ಒರಟು, ಕಟುವಾದದ್ದು, ಮತ್ತೊಬ್ಬರಿಗೆ ನೋವು ಮಾಡುವಂಥದು. ಉತ್ತಮ ಹಾಸ್ಯ ಶುಚಿಯಾಗಿ, ಸರಳವಾಗಿ, ಯಾರ ಮನಸ್ಸಿಗೂ ನೋವು ಉಂಟು ಮಾಡದೆ ನಗಿಸಿ ನಲಿಸಬೇಕು. ಇಂಥ ಶುಭ್ರವಾದ ತಿಳಿಹಾಸ್ಯ ಗದುಗಿನ ಭಾರತ, ಮುದ್ದಣನ ರಾಮಾಶ್ವಮೇಧ, ರತ್ನಾಕರವರ್ಣಿಯ ಭರತೇಶ ವೈಭವ, ಮೊದಲಾದ ಹಿಂದಿನ



ಶ್ರೀ. ಅ. ನ. ಕೃಷ್ಣರಾಯರು.

ಗ್ರಂಥಗಳಲ್ಲಿಯೂ, ಇಂದಿನ ಸಾಹಿತ್ಯದಲ್ಲಿ ಶ್ರೀ. ಮಾಸ್ತಿಯವರ ರಂಗಪ್ಪನ ದೀಪಾವಳಿ ಮೊದಲಾದ ಹಲವು ಬರವಣಿಗೆಗಳಲ್ಲಿಯೂ ಕಂಡು ಬರುತ್ತವೆ. ಬ[illegible] ವಿನೋದವನ್ನು ಮಾತ್ರ [illegible] ಯಿಟ್ಟುಕೊಳ್ಳದೆ, ಕುಂದು [illegible] ಗಳನ್ನು ಎತ್ತಿ ತೋರಿಸಿ [illegible] ಮನ ನೋಯಿಸುವ ಚು[illegible] ಹಾಸ್ಯವೂ ಉಂಟು. ಇದು [illegible] ರನ್ನು, ಸಮಾಜವನ್ನು ತಿದ್ದು[illegible] ದಕ್ಕೆ ಸಹಕಾರಿ, ಅತ್ಯಗತ್ಯ. [illegible] ಚುಚ್ಚುಹಾಸ್ಯ ಶ್ರೀ. ಟಿ. [illegible]

(೨೨ನೆ ಪುಟ ನೋಡಿರಿ)





# ನಿಮಗೆ ಬೇಸರವಾದಾಗ ನನಗೆ ಬರೆಯಿರಿ.

**ಶ್ರೀ. ಕೆ. ವೆಂಕಟರಾವ್ ಮಂಗಳೂರು.**

"ಮಂಗಳೂರು ಮುನಿಸಿಪಲ್ ಕಾಂಗ್ರೆಸ್ ಪಾರ್ಟಿಯವರು ಅವರ ಲೀಡರರಾಗಿದ್ದ ಡಾ|| ಕೆ. ವಿಟ್ಠಲ ಶೆಟ್ಟರ ಸ್ಥಾನಕ್ಕೆ ಶ್ರೀ, ಎಲ್. ಸಿ. ಪಾಯ್ಸ್ರವರನ್ನು ಲೀಡರರನ್ನಾಗಿ ನೇಮಿಸಿರುವರೆಂದೇ ಪತ್ರಿಕೆಗಳಲ್ಲಿ ಪ್ರಕಟವಾಗಿದೆಯಲ್ಲದೆ ಅವಕ್ಕೆ ಕಾರಣವೇನೆಂದು ಇತ್ತಂಡದವರೂ ಹೇಳಲಿಲ್ಲ. ಈ ಬದಲಾವಣೆಗೆ ಕಾರಣಗಳೇನಾದರೂ ಇರಬಹುದೇ?"

ಕಾರಣವಿಲ್ಲದೆ ಯಾವ ಬದಲಾವಣೆಗಳೂ ಆಗುವಂತಿಲ್ಲ. ಒಂದೋ ಡಾ|| ವಿಟ್ಠಲ ಶೆಟ್ಟರು ಲೀಡರರಾಗಿ ಮಾಡಿದ ಕೆಲಸ ಪಾರ್ಟಿಗೆ ಹೆಚ್ಚಾಗಿ ಕಂಡಿರಬಹುದು- ಅಥವಾ ಕಡಿಮೆಯಾಗಿ ಕಂಡಿರಬಹುದು. ಡಾ|| ವಿಟ್ಠಲ ಶೆಟ್ಟರನ್ನು ಪಾರ್ಟಿಯ ನಾಯಕತ್ವದಿಂದ ಹೊರಗೆ ಹಾಕಬೇಕೆಂದು ಮೊದಲೇ ಕೆಲವು ಧುರೀಣರ ಅಪೇಕ್ಷೆಯಿತ್ತಂತೆ. ಅವರು ಅವರ ಅಪೇಕ್ಷೆಯನ್ನು ಈ ರೀತಿ ಈಗಲಾದರೂ ಈಡೇರಿಸಿಕೊಂಡಿರಲೂ ಬಹುದು. ಎಂದೂ ಆಗದಿರುವುದಕ್ಕಿಂತ ತಡವಾಗಿಯಾದರೂ ಆಗುವುದೊಳ್ಳೆಯದಲ್ಲವೆ?

ooo

**ಶ್ರೀ. ಎಸ್. ಎಸ್. ಭಟ್ಟ. ಉಡುಪಿ.**

"ಉಡುಪಿಯ ಬೋರ್ಡ್ ಹೈಸ್ಕೂಲನ್ನು ಕ್ರೈಸ್ತರವಶಕ್ಕೊಪ್ಪಿಸಿ ಕಾಲೇಜನ್ನಾಗಿ ಮಾಡುವ ಯೋಚನೆಯೊಂದು ಬಹುಕಾಲದಿಂದ ನಡೆಯುತ್ತಿದೆ. ಕೇವಲ ವಿದ್ಯೆಯ ದೃಷ್ಟಿಯಿಂದ ಕ್ರೈಸ್ತರು ಕಾಲೇಜಿನ ಆಡಳಿತವನ್ನು ವಹಿಸುವುದಿದ್ದರೆ ಅದಕ್ಕೆ ಇತರರು ವಿರೋಧಿಸುವುದೇಕೆ?"

ವಿರೋಧಿಸುವುದೇಕೆಂದು ವಿರೋಧಿಸುವರಿಗೆ ಗೊತ್ತಿರುವಷ್ಟು ಬೇರೆಯವರಿಗೆ ತಿಳಿದಿರಲಿಕ್ಕಿಲ್ಲ. ಕ್ರೈಸ್ತ ಧರ್ಮಾಧಿಕಾರಿಗಳು ಈ ಕಾಲೇಜನ್ನು ಸ್ಥಾಪಿಸುವ ಕೆಲಸವನ್ನು ಯಾವ ದೃಷ್ಟಿಯಲ್ಲಿ ಕೈಗೊಳ್ಳಲಿದ್ದಾರೆಂಬ ವಿಚಾರವು ಪ್ರಾಯಶಃ ಇತರರಲ್ಲಿ ಸಂಶಯವನ್ನುಂಟು ಮಾಡಿರಬಹುದು. ವಿರೋಧ ಪಕ್ಷದವರ ಸಂಶಯವು ನಿರಾಧಾರವಾದುದೆಂದು ಹೇಳಲಾಗುವುದಿಲ್ಲ. ವಿದ್ಯಾ ಸಂಸ್ಥೆಗಳಲ್ಲಿ ಮತಪ್ರಚಾರವನ್ನು ಮಾಡುವರೆಂಬುದಕ್ಕೆ ಸೈಂಟ್ ಎಲೋಸಿಯಸ್ ಕಾಲೇಜೇ ಒಂದು ನಿದರ್ಶನವಾಗಿದೆ. ವಿದ್ಯಾ ಸಂಸ್ಥೆಗಳಲ್ಲಿ ಮತ ಪ್ರಚಾರಕ್ಕೆಡೆಯಿರುವುದು ಸಾರ್ವಜನಿಕ ದೃಷ್ಟಿಯಲ್ಲಿ ಯೋಗ್ಯವಲ್ಲ. ಜಿಲ್ಲಾ ಬೋರ್ಡಿನವರು ಉಡುಪಿ ಹೈಸ್ಕೂಲನ್ನು ಶ್ರೀಮಂತ ಧರ್ಮಾಧಿಕಾರಿಗಳ ಕೈಗೊಪ್ಪಿಸುವುದು ವಿಹಿತವೆನಿಸುವುದಿಲ್ಲ ಅದಂತಿರಲಿ. ಕ್ರೈಸ್ತ ಬಂಧುಗಳು ಕೇವಲ ವಿದ್ಯಾ ದೃಷ್ಟಿಯಿಂದ ಮಾತ್ರ ಕಾಲೇಜಿನ ಆಡಳಿತ ವಹಿಸುವರೆಂದು ನಿಮಗೆ ಗೊತ್ತಾದ ಬಗೆ ಹೇಗೆ?

ooo

**ಶ್ರೀ. ಶ್ರೀನಿವಾಸರಾವ್, ಮಂಗಳೂರು.**

"ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯವರು ಇತ್ತೀಚೆಗೆ ಹೊರಡಿಸಿದ ಪ್ರಕಟನೆಯಲ್ಲಿ ಅಖಿಲ ಭಾರತ ಚರಖಾ ಸಂಘದವರು ಶಿಫಾರಸು ಮಾಡಿರುವ ಖಾದಿಯೇ ಶುದ್ಧ ಖಾದಿ, ಅದನ್ನೇ ಜನರು ಕೊಂಡುಕೊಳ್ಳಬೇಕೆಂದು ಬಿನ್ನವಿಸಿಕೊಂಡಿದ್ದಾರೆ. ಚರಖಾ ಸಂಘದವರ ಖಾದಿಯ ಭಂಡಾರಗಳಿದ್ದಲ್ಲಿ ಮಾತ್ರ ಅವುಗಳನ್ನು ಕೊಂಡುಕೊಳ್ಳಬಹುದಲ್ಲದೆ ಭಂಡಾರಗಳಿಲ್ಲದ ಸ್ಥಳಗಳ ಜನರು ಶುದ್ಧ ಖಾದಿಯೆಂದು ಮಾರಲ್ಪಡುವ ಬೇರೆ ಖಾದಿಯನ್ನೇ ಕೊಂಡುಕೊಳ್ಳಬೇಕಾಗಿದೆ. ಈ ಕುರಿತು ತಮ್ಮ ಅಭಿಪ್ರಾಯವೇನು?

ಶುದ್ಧ ಖಾದಿಯನ್ನು ಧರಿಸಬೇಕೆಂದಿಚ್ಛಿಸುವವರಿಗೆ ಇದೊಂದು ಸಮಸ್ಯೆಯಾಗಿದೆ. ಉದಾಹರಣೆಗಾಗಿ ದಕ್ಷಿಣ ಕನ್ನಡದಲ್ಲಿ ಅ. ಭಾರತದ ಚರಖಾ ಸಂಘದ ಖಾದಿ ಭಂಡಾರವು ಮಂಗಳೂರಲ್ಲಲ್ಲದೆ ಬೇರೆಲ್ಲಿಯೂ ಇಲ್ಲ. ಚರಖಾ ಸಂಘದವರು ಖಾದಿಯನ್ನು ಎಲ್ಲೆಡೆಗಳಲ್ಲಿರುವ ಜನರಿಗೆ ಒದಗಿಸುವ ಏರ್ಪಾಡನ್ನು ಮಾಡದಿರುವುದು ಶೋಚನೀಯವಾಗಿದೆ. ಎಷ್ಟರ ತನಕ ಚರಖಾ ಸಂಘದವರು ಈ ವ್ಯವಸ್ಥೆ

ಯನ್ನು ಕೈಗೊಳ್ಳುವುದಿಲ್ಲ[illegible] ಅಷ್ಟರ ತನಕ ಚರಖಾ ಸಂಘದವರಿಂದ ಮಾನ್ಯವಾಗದ ವರ್ತಕ ಖಾದಿಯನ್ನು ಜನರುಪಯೋಗಿಸುವುದು ಖಂಡಿತವೆಂದು ನನಗನಿಸುತ್ತದೆ. ಚರಖಾ ಸಂಘದ ಖಾದಿಗೂ, ವರ್ತಕರ ಖಾದಿಗೂ ಇರುವ ಏಕಮಾತ್ರ ವ್ಯತ್ಯಾಸವೆಂದರೆ ಸಂಘದ ಖಾದಿಯನ್ನು ಕೊಂಡುಕೊಳ್ಳುವುದರಿಂದ ಅದಕ್ಕಾಗಿ ದುಡಿಯುವವರಿಗೆ ಹೆಚ್ಚು ಕೂಲಿ ಸಿಗುತ್ತದೆ. ಕಾಂಗ್ರೆಸ್ ಸದಸ್ಯರು ಪ್ರತಿ ವರುಷ ೫,೦೦೦ ಗಜ ನೂಲು ತೆಗೆಯಬೇಕೆಂಬ ಮಹಾತ್ಮಾಜಿಯರ ಸೂಚನೆಯು ಜಾರಿಗೆ ಬಂದರೆ ಶುದ್ಧ ಖಾದಿಯ ಸಮಸ್ಯೆಯೇ ತಲೆದೋರುವುದಿಲ್ಲವಲ್ಲ. ನಿಮಗೆ ಖಾದಿಯಲ್ಲಿ ನಿಜವಾಗಿಯೂ ವಿಶ್ವಾಸವಿದ್ದರೆ ನೀವು ಬೇಗನೆ ನೂಲು ತೆಗೆಯಲು ಪ್ರಾರಂಭಿಸ ಬಾರದೇಕೆ?

---

(೨೦ನೆ ಪುಟದಿಂದ)

ಕೈಲಾಸಂ, ಶ್ರೀ. ಆರ್. ವಿ. ಜಹಗೀರ್‌ದಾರ್, ಶ್ರೀ. ಶಿವರಾಮ ಕಾರಂತರು--ಇವರ ಕೃತಿಗಳಲ್ಲಿ ಕಂಡು ಬರುತ್ತದೆ. ಮಾಲಿಯರ್ ಕವಿಯ ಕೃತಿಯೊಂದರ ಭಾಷಾಂತರವಾದ 'ಆಷಾಢ ಭೂತಿ'ಯೂ ಈ ಜಾತಿಗೇ ಸೇರಿದ್ದು. ಇಂಥ ವಿಡಂಬನೆ, ಈ ಕಟು ಹಾಸ್ಯ ಮನುಷ್ಯನನ್ನು ಹೊಡೆದೆಬ್ಬಿಸುತ್ತದೆ.



ಕರ್ತವ್ಯದ ಕಡೆಗೆ ಅವನ ಕಣ್ಣು ತಿರುಗಿಸುತ್ತದೆ.

ಇದಲ್ಲದೆ ಮಾತಿನ ಜೋಡಣೆಯಿಂದ, ಕೇವಲ ಚಮತ್ಕಾರದಿಂದ ಉಂಟುಮಾಡುವ ಹಾಸ್ಯವೊಂದುಂಟು. ಈ ಚಮತ್ಕಾರದ ಹಾಸ್ಯ ಒಂದು ಸಲಕ್ಕೇ ಸರಿ. ಮತ್ತೆ ಬಂದರೆ ಸ್ವಾರಸ್ಯವಿಲ್ಲ. ಇದರಲ್ಲಿ ಪ್ರೌಢಿಮೆ ಹೆಚ್ಚು; ಇದು ಬುದ್ಧಿ ಪ್ರಧಾನವಾದದ್ದು. ಹೃದಯಕ್ಕೆ ಮುಟ್ಟುವುದಿಲ್ಲ.

ಸದಾರಮೆ ನಾಟಕದಲ್ಲಿ ಬರುವ ಹಾಸ್ಯದ ಜಾತಿ ಮತ್ತೊಂದಿದೆ. ಅದು ಬಹು ಕೀಳು ದರ್ಜೆಯ ಹಾಸ್ಯ. ಮಾತೂ ಕೀಳು; ಬರಿ ನಕಲಿ.

---

# ಲೋಕಾವಲೋಕನ

## ಬ್ರಿಟಿಷರ ಅನಾಚರ

ಜೆಕೊಸ್ಲೊವೇಕಿಯದ ಸ್ಯುಡೇಟನ್ ಪ್ರಾಂತ್ಯವನ್ನು ಜರ್ಮನಿಗೆ ಬಿಟ್ಟುಕೊಡಬೇಕೆಂಬ ನಿರ್ಣಯವನ್ನು ಮಾಡಿರುವುದರಿಂದ ಬ್ರಿಟಿಷ್ ಮತ್ತು ಫ್ರೆಂಚ್ ಸರಕಾರಗಳು ಅಕ್ಷಮ್ಯ ಅಪರಾಧವನ್ನು ಮಾಡಿವೆ. ಫ್ರೆಂಕೋ- ಬ್ರಿಟಿಷ್ ನಿರ್ಣಯವನ್ನು ಸಮಗ್ರ ಜಗತ್ತು ಖಂಡಿಸಿರುವುದಲ್ಲದೆ ಬ್ರಿಟಿಷ್ ಪ್ರಧಾನ ಮಂತ್ರಿಗಳ ಚಾಣಾಕ್ಷತೆಯನ್ನು ಯಾರೂ ಪ್ರಶಂಸಿಸಲಿಲ್ಲ.

ಕಳೆದ ಮಹಾಯುದ್ಧದ ಬಳಿಕ ನಡೆದ ಶಾಂತಿ ಪರಿಷತ್ತಿನಲ್ಲಿ ಬ್ರಿಟನ್, ಫ್ರೆಂಚ್ ಮತ್ತು ಅಮೇರಿಕದ ಯುನೈಟೆಡ್ ಸ್ಟೇಟ್ಸ್‌ಗಳು ಬೊಹೇಮಿಯದ ಜರ್ಮನರ ಇಚ್ಛೆಗೆ ವ್ಯತಿರಿಕ್ತವಾಗಿ ಸ್ಯುಡೇಟನ್ ಪ್ರಾಂತ್ಯವನ್ನು ಜೆಕೊಸ್ಲೊವೇಕಿಯಕ್ಕೆ ಸೇರಿಸಿರುವುದಿದ್ದರೂ ಯುರೋಪಿನ "ಮಹಾತುಂಟ"ನಾದ ಹಿಟ್ಲರನಿಗೆ ಬೆದರಿ ಈಗ ಅದನ್ನು ಹಿಟ್ಲರನಿಗೆ ಕೊಡಲೊಪ್ಪಿರುವುದು ಲಜ್ಜಾವಹವಾದೆ.

## ರಷ್ಯದ ಬೆಂಬಲ

ಮಧ್ಯ ಯುರೋಪಿನ ಈ ವಿಷಾದಾಂತ ನಾಟಕದಲ್ಲಿ ರಷ್ಯವು ಪ್ರತ್ಯಕ್ಷವಾಗಿ ಭಾಗವಹಿಸದಿದ್ದರೂ ಮೊದಲೇ ಮಾಡಲ್ಪಟ್ಟಿರುವ ಝೆಕ್- ರಷ್ಯನ್ ಒಪ್ಪಂದಕ್ಕನುಸಾರವಾಗಿ ಜೆಕೊಸ್ಲೊವೇಕಿಯಕ್ಕೆ ಪೂರ್ಣ ಬೆಂಬಲವು ಕೊಡಲ್ಪಡುವುದೆಂದು ಸ್ಟಾಲಿನನು ಹೇಳಿದ್ದಾನೆ. ಬ್ರಿಟಿಷರು ಈ ಬಾರಿ ಅನುಸರಿಸಿಕೊಂಡ ಧೋರಣೆಯನ್ನು ನೋಡುವಾಗ ರಷ್ಯಕ್ಕೆ ವಿರುದ್ಧವಾಗಿ ನಡೆದು ಜರ್ಮನಿ, ಇಟಲಿ ಮತ್ತು ಜಪಾನುಗಳ ಕೊಮಿಂಟರ್ನ್‌ವಿರೋಧಪಕ್ಷಕ್ಕೆ ಬೆಂಬಲವನ್ನು ಕೊಟ್ಟಂತಿದೆ.

## ಝೆಕ್ ನಿರ್ಧಾರ

ಜೆಕೊಸ್ಲೊವೇಕಿಯದ ಮಂತ್ರಿಮಂಡಲಗಳಲ್ಲಿ ಹಲವು ವ್ಯತ್ಯಾಸಗಳಾಗಿವೆ. ಡಾ| ಹಾರುಸಾರವರ ಮಂತ್ರಿಮಂಡಲವು ರಾಜೀನಾಮೆಯಿತ್ತಿರುವುದಲ್ಲದೆ ಅವರ ಬದಲಿಗೆ ಅಲ್ಲಿಯ ರಾಷ್ಟ್ರೀಯ ವೀರರ ಸೈನ್ಯದ ಮಹಾ ಪ್ರಧಾನರೂ ಆದ ಜನರಲ್ ಸರ್ವ್ಯಾಯ್‌ರವರು ಪ್ರಧಾನ ಮಂತ್ರಿಗಳಾಗಿ ಆರಿಸಲ್ಪಟ್ಟಿದ್ದಾರೆ. ಜರ್ಮನರಿಗೆ ವಿರೋಧವಾಗಿ ಕಳೆದ ಮಹಾಯುದ್ಧದಲ್ಲಿ ಇವರು ಯಶಸ್ವಿಯಾಗಿ ರಷ್ಯದಲ್ಲಿ ಹಲವು ಬಾರಿ ಹೋರಾಡಿದ್ದಾರೆ.

## ಯುದ್ಧವಾಗುವುದೆ?

ಪ್ರತಿಯೊಂದು ರಾಷ್ಟ್ರವೂ ಯುದ್ಧಸಿದ್ಧತೆಗಳನ್ನು ಮಾಡುತ್ತಿದೆ. ಜೆಕೊಸ್ಲೊವೇಕಿಯದವರು ಕೂಡಾ ಬ್ರಿಟನ್- ಫ್ರಾನ್ಸುಗಳ ಬುದ್ಧಿವಾದಕ್ಕನುಸಾರವಾಗಿ ಆತ್ಮಹತ್ಯೆಯನ್ನು ಮಾಡಿಕೊಳ್ಳಲು ಸಿದ್ಧವಾಗಿಲ್ಲ. ಹಿಟ್ಲರನು ಹೊಸ ಹೊಸ ಕೇಳಿಕೆಗಳನ್ನು ಮುಂದೆ ತಂದಿದ್ದಾನೆ. ಇವುಗಳನ್ನು ನೋಡುವಾಗ ಅವನಿಗೆ ಸ್ಯುಡೇಟನ್ ಪ್ರಾಂತ್ಯವೊಂದಲ್ಲ, ಸಮಗ್ರ ಜೆಕೊಸ್ಲೊವೇಕಿಯವು ಬೇಕಾಗಿದೆಯೆಂದು ಸ್ಪಷ್ಟವಾಗುತ್ತದೆ.

## ಚೇಂಬರ್ಲೇನರ ಯತ್ನ

ಬ್ರಿಟನಿನ ಮಹಾ ಪ್ರಧಾನರಾದ ಚೇಂಬರ್ಲೇನರು ನಾಲ್ಕೈದು ಬಾರಿ ಹಿಟ್ಲರನನ್ನು ಕಂಡರೂ ಪರಿಸ್ಥಿತಿಯು ಸುಧಾರಿಸಲಿಲ್ಲ. ಜೆಕ್ ಸರಕಾರದವರು ಸ್ಯುಡೇಟನ್ ಜರ್ಮನರನ್ನು ಅಲ್ಲಿಂದ ಹೊರಗೋಡಿಸುತ್ತಿದ್ದಾರೆ. ಆಸ್ಟ್ರಿಯಾ ಮತ್ತು ಜೆಕೊಸ್ಲೊವೇಕಿಯಗಳೊಳಗಿದ್ದ ಟೆಲಿಗ್ರಾಫ್ ಮೊದಲಾದ ಸಂಬಂಧಗಳು ಕಡಿದು ಹಾಕಲ್ಪಟ್ಟಿವೆ. ಹೆರ್ ಹಿಟ್ಲರನು ಜೆಕೊಸ್ಲೊವೇಕಿಯಕ್ಕೆ ನಿನ್ನೆಯ ವರೆಗೆ ಸಮಯ ಕೊಟ್ಟಿರುತ್ತಾನೆ. ರಾಷ್ಟ್ರರಾಷ್ಟ್ರಗಳ ಚಾಣಾಕ್ಷತೆಯ ಚದುರಂಗದಾಟದ ಪರಿಣಾಮವಾಗಿ ಯುದ್ಧವಾಗುವುದೋ ಇಲ್ಲವೋ ಎಂಬುದನ್ನು ಹೇಳುವುದು ಪ್ರಯಾಸವಾಗಿ ಪರಿಣಮಿಸಿದೆ.

## ಚೀನದ ಮಹಾ ಸಮರದಲ್ಲಿ ವಿಷಗಾಳಿಯ ಪ್ರಯೋಗ

ಜಪಾನಿಯರು ಚೀನದಲ್ಲಿ ವಿಷಗಾಳಿಯನ್ನು ಪ್ರಯೋಗಿಸಲಾರಂಭಿಸಿದ್ದಾರೆ. ಈ ವಿಚಾರವನ್ನು ಚೀನಾ ಸರಕಾರದ ಪರವಾಗಿ ಡಾ| ವಿಲ್ಲಿಂಗ್ಟನ್ ಕೂರವರು ಜನಾಂಗ ಸಭೆಯ ಮುಂದೆ ತಗಲು ಅಂತರ್‌ರಾಷ್ಟ್ರೀಯ ಒಪ್ಪಂದದ ೧೬ನೆಯ ಶರ್ತವಾದ ಸ್ಯಾಂಕ್ಷನ್ನು ಜಪಾನಿನ ಮೇಲೆ ಉಪಯೋಗಿಸಬೇಕೆಂಬ ನಿರ್ಣಯವನ್ನು ಜಪಾನು ಅಲಕ್ಷಿಸಿದೆ. ಜನಾಂಗ ಸಭೆಯು ಶಕ್ತಿಶೂನ್ಯವಾದುದರಿಂದ

ಇದರಿಂದ ಚೀನಕ್ಕೆ ಹೆಚ್ಚಿನ ಪ್ರಯೋಜನವಾಗುವಂತಿಲ್ಲ.

ಚೀನದಲ್ಲಿ ಹೋರಾಡುವ ಪ್ರತಿಯೊಂದು ಜಪಾನ್ ಪಡೆಯೊಡನೆ ವಿಷಗಾಳಿಯ ಸಾಧನಗಳು ಇವೆಯೆಂದು ವಿಶ್ವಸನೀಯವಾಗಿ ಹೇಳಲಾಗಿದೆ. ಜನಾಂಗ ಸಭೆಯು ಈ ವಿಚಾರವನ್ನು ಪೂರ್ಣವಾಗಿ ಒಪ್ಪುವುದಿದ್ದರೂ ಹಸಿ ಪದಾರ್ಥ, ಮತ್ತು ಆರ್ಥಿಕ ಸಹಾಯವನ್ನು ಜಪಾನಿಗೆ ಕೊಡಿಸದಂತೆ ಮಾಡುವಷ್ಟು ಶಕ್ತಿಯು ಜನಾಂಗಸಭೆಗಿಲ್ಲದಿದ್ದರೂ ಚೀನವು ಅದರ ಮೇಲೆ ಎಬಿಸೀನಿಯದಂತೆ ವಿಶ್ವಾಸವಿಟ್ಟಿರುವುದು ಶೋಚನೀಯವಾಗಿದೆ.

ಕ್ಯೂಕಿಯಾಂಗ್ ಮತ್ತು ನಾನ್ಚಾಂಗ್‌ಗಳೊಳಗಿರುವ ೯೦ ಮೈಲು ಉದ್ದದ ಪರ್ವತ ರೈಲ್ವೆಯ ಬಳಿಯಲ್ಲಿದ್ದ ಚೀನೀಯ ಸೈನ್ಯವನ್ನು ಜಪಾನಿಯರು ಸೋಲಿಸಿದ್ದಾರೆ. ಚೀನದ ಸೈನ್ಯವು ಜೀವದಾಶೆ ತೊರೆದು ಹೋರಾಡುವುದಿದ್ದರೂ ಜಪಾನಿಯರು ಟ್ರೀಸೀ ವಿಭಾಗದಲ್ಲಿ ಯಶಸ್ವಿಯಾಗಿ ಹೋರಾಡುತ್ತಿದ್ದಾರೆ.

o o o

## ಮೆಕ್ಸಿಕೋ ಅಮೇರಿಕ ಚರ್ಚೆ

೧೯೨೭ ರಿಂದ ೧೯೩೮ರ ತನಕ ಮೆಕ್ಸಿಕೋ ಸರಕಾರವು ಯುನೈಟೆಡ್ ಸ್ಟೇಟ್ಸಿನ ಪ್ರಜೆಗಳಿಂದ ಕಿತ್ತುಕೊಂಡ ಆಸ್ತಿಯನ್ನು ಈಗ ಆಸ್ತಿ ಪಾಸ್ತಿಗಳಿಲ್ಲದ ಮೆಕ್ಸಿಕೋ ಪ್ರಜೆಗಳಿಗೆ ಹಂಚಿಕೊಟ್ಟಿದೆ ಯುನೈಟೆಡ್ ಸ್ಟೇಟ್ಸಿನ ಸೆಕ್ರೆಟರಿ ಆಫ್ ಸ್ಟೇಟರಾದ ಹಲ್‌ರವರು ಮೆಕ್ಸಿಕೊ ಸರಕಾರವು ಕಿತ್ತುಕೊಂಡ ಭೂಮಿಯ ಹಣವನ್ನು ಕೊಡಬೇಕೆಂದು ಸೂಚಿಸಿದರೂ ಅಲ್ಲಿಯ ಅಧ್ಯಕ್ಷರಾದ ಲಿಝಾರೋ ಕಾರ್ಡೆನಾಸ್‌ರವರು—ಹಣಕೊಡಬೇಕೆಂಬ ಅಂತರ್‌ರಾಷ್ಟ್ರೀಯ ನಿಯಮವಿಲ್ಲವೆಂದು ಉತ್ತರವಿತ್ತಿದ್ದಾರೆ. ಯುನೈಟೆಡ್ ಸ್ಟೇಟ್ಸಿಗೂ ಮೆಕ್ಸಿಕೋ ರಾಜ್ಯಕ್ಕೂ ದೊಡ್ಡವಾದ ಯುದ್ಧ ಪ್ರಾರಂಭವಾಗಿದೆ.

ಚೀನದ ಕಿವಿ ಜಪಾನಿನ ಕೈಯಲ್ಲಿ—




**ಜಪಾನ್:** (ಚೀನದೊಡನೆ) ರಷ್ಯದ ದೊಡ್ಡ ದೇಹದವನು ಮಂಚೂರಿಯುವನ್ನಾಕ್ರಮಿಸುವಾಗ ಕಣ್ಣು ಕಾಣುವುದಿಲ್ಲವೆ?

—ಎನ್ನುತ್ತಿದೆ ರಷ್ಯದ ಪತ್ರಿಕೆಯಲ್ಲಿ ಪ್ರಕಟವಾದ ಈ ವ್ಯಂಗ್ಯ ಚಿತ್ರ



ಖಾದಿಯನ್ನು ಕೊಂಡುಕೊಳ್ಳುವುದರಿಂದ ೧,೭೭,೪೯೬ ಮಂದಿ ನೂಲುವವರಿಗೆ ಕೆಲಸವನ್ನೊದಗಿಸಿದಂತಾಗುತ್ತದೆಂದು ಒರಿಸ್ಸದ ಪ್ರಧಾನರಾದ ಶ್ರೀ ವಿಶ್ವನಾಥ ದಾಸರು ಹೇಳಿದ್ದಾರೆ. ಅಲ್ಲಲ್ಲಿ ಖಾದಿ ಪ್ರದರ್ಶನ ಮೊದಲಾದುವುಗಳು ನಡೆದಿವೆ. ಖಾದಿಯ ಆರ್ಥಿಕ ಉಪಯುಕ್ತತೆಯನ್ನು ಹೆಚ್ಚಿನವರು ನಂಬದಿದ್ದರೂ ಆದರ ಪ್ರಗತಿಯಲ್ಲಿ ಹಿಂದೇಟು ಕಾಣದಿರುವುದರಿಂದ ಅಚ್ಚ ಸ್ವದೇಶಿಯಾದ ಖಾದಿಯನ್ನು ಭಾರತದ ಎಲ್ಲೆಡೆಗಳಲ್ಲಿಯೂ ಜನರು ಕೊಂಡುಕೊಂಡಿರುವರೆಂದು ಗಾಂಧಿ ಜಯಂತಿಯ ಯಶಸ್ವೀ ಆಚರಣೆಯಿಂದ ಸ್ಪಷ್ಟವಾಗಿದೆ.

### ಬರ್ಮದ ಜಾತೀಯ ಕಲಹ

ಇನ್ನೂ ಮುಗಿಯಲಿಲ್ಲ. ಬರ್ಮದ ಗೊಂದಲಕ್ಕೆ ಮುಸ್ಲಿಮ್ ಮಲ್ಲರೊಬ್ಬರು ಬರೆದ ಪುಸ್ತಕವು ಮೂಲ ಕಾರಣವಲ್ಲ. ಬ್ರಿಟಿಷ್ ಸರಕಾರದ ಕೈಯ್ಯು ಅದರ ಹಿಂದಿದೆಯೆಂದು ಈಗ ಸ್ಪಷ್ಟವಾಗಿದೆ. ಈಗಾಗಲೆ ಬರ್ಮದ ಆಕ್ಕಿಯನ್ನು ಬಹಿಷ್ಕರಿಸಬೇಕೆಂದು ಮದ್ರಾಸಿನಲ್ಲಿ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರಾದ ಮಿ| ಶಾಫಿ ಮಹಮುದ್‌ರವರು ಒಂದು ಠರಾವನ್ನು ಅಖಿಲ ಭಾರತ ಕಾಂಗ್ರೆಸ್ ಕಮಿಟಿಯ ಮುಂದೆ ತಂದಿರುತ್ತಾರೆ. ಬರ್ಮದ ಜಾತೀಯ ಕಲಹದ ಕಾರಣಗಳನ್ನು ಹುಡುಕಿ ತೆಗೆಯಲು ಒಂದು ಯೋಗ್ಯ ಸಮಿತಿಯ ನೇಮಕವಾಗಬೇಕೆಂದು ಸೂಚನೆಗಳು ಮುಂದೆ ಬಂದಿವೆ.





**ಪಂಡಿತ ನೆಹರುಗಳು**
ಯುರೋಪಿನಲ್ಲಿ ಯದ್ಧ ಪ್ರಾರಂಭಿಸಿದರೆ ಭಾರತಕ್ಕೆ ಹಿಂತೆರಳುವೆನೆಂದಿದ್ದಾರೆ.

# ("ಸೋಡಾ ಸೋಡಾ")

ಮೊದಲಿನ ಕಾಲದ ಜನರು ಪರಸ್ಥಳಗಳಿಗೆ ಹೋದಲ್ಲಿ ಬಾಯಾರಿಕೆಯಾದಾಗ ಯಾರ ಮನೆಗಾದರೂ ಹೋಗಿ ಯಥೇಷ್ಟ ನೀರು ಕುಡಿಯುತ್ತಿದ್ದರು. ಮನೆಗೆ ಬಂದವರಿಗೆ ಬೆಲ್ಲ ಮತ್ತು ನೀರು ಕೊಡುವುದು ಎಲ್ಲರಲ್ಲಿಯೂ ಪದ್ಧತಿಯಿತ್ತು. ದಾರಿಗರಿಗೆ ಬಾಯಾರಿಕೆಯಾದಾಗ ನೀರು ಕೊಡುವುದಕ್ಕಾಗಿ ಅಲ್ಲಲ್ಲಿ ಪುಣ್ಯಾತ್ಮರು ಅರವಟ್ಟಿಗೆಗಳನ್ನು ಏರ್ಪಡಿಸುತ್ತಿದ್ದರು. ಹೇಗೂ ಪೈ ಖರ್ಚುಮಾಡದೆ ಜನರು ಶುದ್ಧವಾದ ನೀರನ್ನು ಕುಡಿಯುತ್ತಿದ್ದರು. ಹಿಂದಿನ ಜನರು.

ಈಗಿನವರ ಕ್ರಮವೇ ಬೇರೆ. ಈಗಿನವರು ಧರ್ಮಕ್ಕೆ ಯಾವುದನ್ನೂ ಸ್ವೀಕರಿಸುವವರಲ್ಲ. ಧರ್ಮಕ್ಕೆ ಸಿಕ್ಕುವ ಶುದ್ಧವಾದ ನೀರನ್ನು ಬಿಟ್ಟು ಒಂದು ಮುಕ್ಕಾಲು ಕೊಟ್ಟು ಅಶುದ್ಧವಾದ ಸೋಡದ ನೀರನ್ನು ಕುಡಿಯುತ್ತಾರೆ. ಸೋಡದ ಹುಚ್ಚು ನಮ್ಮ ಜನರಿಗೆ ಹೇಗೆ ಹಿಡಿಯಿತೋ ತಿಳಿಯದು. ನೀರು ಯಥೇಷ್ಟವಾಗಿ ದೊರೆಯುವ ನಮ್ಮ ಜಿಲ್ಲೆಯಲ್ಲಿ ನೀರನ್ನು ಸಂತೆ ಸಂತೆಗಳಲ್ಲಿ ಮಾರುತ್ತಿರುವುದು ಆಶ್ಚರ್ಯವಲ್ಲವೇ? ಸೋಡದೊಳಗಿರುವ ನೀರಾದರೂ ಶುದ್ಧ ನೀರೇ? ಸೋಡಾ ಕಂಪೆನಿಗಳಲ್ಲಿ ನೀರು ತುಂಬಿಸಿಡುವ ಪಾತ್ರವನ್ನು ನೋಡಬೇಕು. ವಾರಕ್ಕೊನ್ಮೆಯಾದರೂ ಅದನ್ನು ತೊಳೆಯುವುದೇ ಕಷ್ಟವಾಗಿದೆ. ಇನ್ನು ಆ ಬಾಟ್ಲಿಯ ಶುದ್ಧತೆಯನ್ನೇನೆನ್ನಬೇಕು? ಎಲ್ಲರೂ ಆ ಬಾಟ್ಲಿಯನ್ನು ಬಾಯಿಯಲ್ಲಿಟ್ಟೇ ಕುಡಿಯುವರು. ನಂತರ ಬಾಟ್ಲಿಯನ್ನು ತೊಳೆಯುವುದೆಂದರೆ ಶಾಸ್ತ್ರಕ್ಕೆ ತಕ್ಕ. ಕುಡಿಯಲಿಕ್ಕಾದರೂ ರುಚಿಯಿದೆಯೇ? ಬಿಸಿಲಿನಲ್ಲಿ ಕಾದು ಕಾದು ಗೇಸಿನೊಡನೆ ಬಾಯಿಗೆ ಹಾಕಿಕೊಳ್ಳುವಾಗ ಗಂಟಲು ಸುಟ್ಟಂತಾಗುತ್ತದೆ. ಕೆಲವರಿಗೆ ಅದನ್ನು ಕುಡಿಯುವುದೇ ಕಷ್ಟವಾಗುತ್ತದೆ. ಹಾಗಾದರೆ ಇಷ್ಟು ಕಷ್ಟದಿಂದ ದುಡ್ಡುಕೊಟ್ಟು ಈ ಅಶುದ್ಧವಾದ ನೀರನ್ನು ಬಾಟ್ಲಿಯಿಂದ ಜನರು ಏತಕ್ಕೆ ಕುಡಿಯುತ್ತಾರೆಂದು ಗೊತ್ತಿದೆಯೇ? ಬುಸ್ಸೆಂದು ಮೇಲಕ್ಕೇರಿ ಬರುವ ಗೇಸಿಗಾಗಿ. ಇದರಿಂದ ಪ್ರಯೋಜನವೇನೆಂದು ಎಣಿಸುವವರೇ ಇಲ್ಲ. ಸೋಡವು ಜೀರ್ಣಕ್ಕೆ ಸಹಾಯ ಮಾಡುತ್ತದೆ ಎನ್ನುತ್ತಾರೆ. ಅದು ಎಷ್ಟರವಟ್ಟಿಗೆ ನಿಜವೆಂದು ಗೊತ್ತಿಲ್ಲ. ಒಂದು ಪಕ್ಷಕ್ಕೆ ಅದು ನಿಜವೆಂತಾದರೂ ಕಲ್ಲನ್ನು ತಿಂದರೂ ಜೀರ್ಣಮಾಡಿಕೊಳ್ಳುವಷ್ಟು ಶಕ್ತಿಯುಳ್ಳ ಯುವಕರು ಅದನ್ನು ಏಕೆ ಕುಡಿಯಬೇಕು?

ಆದುದರಿಂದ ಪ್ರಿಯ ವಾಚಕನೇ ನೀನು ಶುದ್ಧವಾದ ನೀರನ್ನು ಕುಡಿಯಬೇಕು. ಅನವಶ್ಯಕವಾಗಿ ಹಣ ಕೊಟ್ಟು ಅಶುದ್ಧವಾದ ಸೋಡದ ನೀರನ್ನು ಕುಡಿಯಬೇಡ. ಸಿಕ್ಕಿದಲ್ಲೆಲ್ಲಾ ಸೋಡವನ್ನು ಕುಡಿಯುವುದರಿಂದ ನಿನ್ನ ಆರೋಗ್ಯವು ಕೆಡುತ್ತದೆಂಬುದರಲ್ಲಿ ಸಂದೇಹವಿಲ್ಲ.

ಮೊದಲಿನವರ ಕ್ರಮದಲ್ಲಿಯೇ, ಬಸ್ಸು ಸ್ಟೇಶನುಗಳಲ್ಲಿ, ಸಂತೆಗಳಿರುವಲ್ಲಿ, ಜನಸ್ತೋಮ ಇರುವಲ್ಲೆಲ್ಲಾ ಶುದ್ಧವಾದ ನೀರು ದೊರೆಯುವ ವ್ಯವಸ್ಥೆಯನ್ನು ನಮ್ಮ ಜಿಲ್ಲಾ ಬೋರ್ಡಿನವರು ಮಾಡುತ್ತಿದ್ದರೆ ಎಷ್ಟು ಉಪಕಾರವಿತ್ತು.

ಇತಿ.

ನಿನ್ನ ಗೆಳೆಯ.

(ಬರುವವಾರ ಬಸ್ಸುಪ್ರಯಾಣದ ವಿಷಯ.)

# ಓಂ ಮಂಡಲಿಯು "ಮಹಾಭಾರತ ಯುದ್ಧ"

## "ಲೇಖರಾಜರ ಗೋಪಿಯರು ಪಾಂಡವರು, ಸಿಂಧಪ್ರಾಂತ್ಯದ ಜನರು ಕೌರವರು!"

### ಆಲಿಂಗನ, ಪರಿಮಳದ್ರವ್ಯ ಹಾಡು ನೃತ್ಯಗಳೇ 'ಬ್ರಹ್ಮಚರ್ಯ'ದ ಶರ್ತಗಳು!

### ಯಾರೂ ದೊರಗು ಬಟ್ಟೆಗಳನ್ನು ಧರಿಸಬಾರದು!

> ಸಿಂಧ ಪ್ರಾಂತ್ಯದ ಓಂ ಮಂಡಲಿಯ ಸಮಸ್ಯೆಯು ಇನ್ನೂ ಮುಗಿದಿಲ್ಲ. ತರುಣಿಯರು ತಮ್ಮ ಗಂಡಂದಿರೊಡನೆ ಹೇಳದೆಯೇ ನವೀನಾವತಾರ ಪುರುಷ ಭಾಯಿಊ ಲೇಖರಾಜರ "ಸತ್ಸಂಗ" ಮಾಡಲು ಹೋಗುತ್ತಿದ್ದಾರೆ. ಸಿಂಧ ಪ್ರಾಂತ್ಯದ ಜನರ ಎಲ್ಲಾ ಯತ್ನಗಳು ನಿಷ್ಫಲವಾಗಿವೆ. ಸರಕಾರಕ್ಕೆ ಈ ಸಮಸ್ಯೆಯನ್ನು ಬಿಡಿಸಲಾಗಲಿಲ್ಲ. "ಸಿಂಧ ಒಬ್ಸರ್ವರ್" ಪತ್ರಿಕೆಯಲ್ಲಿ ಪ್ರಕಟವಾದ ಓಂ ಮಂಡಲಿಯ ವಿಚಾರಣಾ ಸಮಿತಿಯ ಅಧ್ಯಕ್ಷರ ಸ್ವಾರಸ್ಯವಾದ ಹೇಳಿಕೆಯನ್ನು ಕೆಳಗೆ ಕೊಡಲಾಗಿದೆ.

ಸ್ವಲ್ಪ ಸಮಯದ ಹಿಂದೆ ಕರಾಚಿಯಲ್ಲಿ 'ಓಂ ಮಂಡಲಿ'ಯೆಂಬ ಧಾರ್ಮಿಕ ಸಂಸ್ಥೆಯು ಭಾಯಿಊ ಲೇಖರಾಜರಿಂದ ಸ್ಥಾಪಿಸಲ್ಪಟ್ಟಿದೆಯೆಂದು ನಾವು ಪ್ರಕಟಿಸಿದ್ದೆವು. ಸಿಂಧಪ್ರಾಂತ್ಯದ ಹೈದರಾಬಾದಿನ ಸಾರ್ವಜನಿಕರು ಈ ಮಂಡಲಿಯ ಕುರಿತು ಯೋಗ್ಯ ವಿಚಾರಣೆ ನಡೆಸಲು ಒಂದು ಸಮಿತಿಯನ್ನೇರ್ಪಡಿಸಿದ್ದರು. ಅದರ ಅಧ್ಯಕ್ಷರಾದ ಶ್ರೀ. ಜಂಗಾರಾಮರವರು ಪ್ರಕಟಿಸಿದ ವಿಚಾರಣಾ ವರದಿಯು ಕೆಳಗಿನಂತಿದೆ:—ವಿಚಾರಣಾ ಸಮಿತಿಯು ನಾಲ್ಕು ತಿಂಗಳುಗಳಿಂದ ಕೆಲಸವನ್ನು ನಡೆಸಿರುವುದಲ್ಲದೆ ಅದಕ್ಕಾಗಿ ನೂರು ಬಾರಿ ಸಭೆ ಸೇರಿದೆ.

ಅವರ ಅಧ್ಯಕ್ಷರು ನ್ಯಾಯಪಾಲನೆಗಾಗಿ ಇತ್ತಂಡದವರ ಅಭಿಪ್ರಾಯಗಳನ್ನು ಕೊಟ್ಟಿದ್ದಾರೆ.

**ಓಂ ಮಂಡಲಿಯ ಹೇಳಿಕೆ.**

ಓಂ ಮಂಡಲಿಯವರು ತಮ್ಮ ಸಂಘದ ಕುರಿತು ಹೀಗೆ ಹೇಳಿಕೊಳ್ಳುತ್ತಾರೆ.

೧. ಓಂ ಮಂಡಲಿಯೆಂಬುದೊಂದು ಧಾರ್ಮಿಕ ಸಂಸ್ಥೆ. ಅಲ್ಲಿ ಸ್ತ್ರೀಯರೇ ಜ್ಞಾನ ಪ್ರಚಾರ ಕಾರ್ಯವನ್ನು ಮಾಡುತ್ತಾರೆ. ಈ ಕೆಲಸಕ್ಕೆ ಇನ್ನಾರೂ ಅರ್ಹರಲ್ಲದಿರುವುದರಿಂದ ಸ್ತ್ರೀಯರೇ ಈ ಕೆಲಸವನ್ನು ಕೈಗೊಂಡಿದ್ದಾರೆ.

**ಬ್ರಹ್ಮಚರ್ಯ ಪಾಲನೆ.**

೨. ಈ ಜ್ಞಾನಾಮೃತವನ್ನು ಸವಿದವರು ಬ್ರಹ್ಮಚರ್ಯ ಜೀವನವನ್ನು ನಡೆಸಬೇಕಾಗಿರುವುದರಿಂದ ಮದುವೆಯಾಗದಿರುವುದು ಅತ್ಯವಶ್ಯವಾಗಿದೆ. ಮದುವೆಯಾದವರು ಕೂಡಾ ಈ ಜ್ಞಾನಾಮೃತವನ್ನು ಸವಿದಿದ್ದರೆ ಹಿರಿಯರ ಅಥವಾ ಗಂಡಂದಿರ ಅಪ್ಪಣೆಯನ್ನು ಪಡೆಯದೆನೇ ಅವರು ಬ್ರಹ್ಮಚರ್ಯವನ್ನು ಪಾಲಿಸಬಹುದು.

**ಜಗತ್ತಿಗೆ ಜ್ಞಾನದಾನ.**

ಈ ಸಂಸ್ಥೆಯು ಒಂದು ವಿದ್ಯಾನಿಲಯವನ್ನು ಸ್ಥಾಪಿಸಿ ಮಕ್ಕಳಿಗೆ ಅನ್ನ ಬಟ್ಟೆಗಳನ್ನು ಧರ್ಮಾರ್ಥವಾಗಿ ಕೊಡುತ್ತಿದೆ. ಈ ಶಾಲೆಯಲ್ಲಿ ಜ್ಞಾನ ಸಂಪಾದಿಸಿದ ಮೊದಲನೆ ೫೦ ಮಂದಿ ಅವಿವಾಹಿತರಾಗಿರಬೇಕು. ಅವರು ಜ್ಞಾನ ಸಂಪಾದನೆ ಮಾಡಿದ ಬಳಿಕ ಸಮಗ್ರ ಭಾರತ ಮತ್ತು ಜಗತ್ತಿನಲ್ಲಿ ಈ ಜ್ಞಾನವನ್ನು ಪ್ರಚಾರಮಾಡತಕ್ಕದ್ದು.

ಇಷ್ಟು ಓಂ ಮಂಡಲಿಯವರ ಹೇಳಿಕೆಯಾಗಿದೆ.

**ಜನತೆಯ ಹೇಳಿಕೆ.**

೧. ಈ ಚಳವಳವು ಅನೇಕ ಮನೆಗಳನ್ನು ಹಾಳು ಮಾಡಿರಡುವು ದಲ್ಲದೆ ಅವರ ಗೃಹಜೀವನದ ಶಾಂತ ವಾತಾವರಣವನ್ನು ಕೆಡಿಸಿದೆ. ಹೆಂಡಂದಿರು ತಮ್ಮ ಗಂಡಂದಿರು ಬೇರೆ ಸ್ತ್ರೀಯರನ್ನು ವಿವಾಹವಾಗ ಬಹುದೆಂದು ಸಮ್ಮತಿಯನ್ನಿತ್ತಿದ್ದಾರೆ. ಪತಿ ಪತ್ನಿಯರು ಒಂದೇ ಗೃಹದಲ್ಲಿರುವುದು ಕೊಳಕೆಂದು ಸ್ತ್ರೀಯರು ಹೇಳುತ್ತಿದ್ದಾರೆ. ಇದರಿಂದಾಗಿ ಅನೇಕ ಕಡೆಗಳಲ್ಲಿ ಜಗಳಗಳು ತಲೆದೋರಿವೆ. ಹಿಂದೂ ಶಾಸ್ತ್ರವು ಬಹುಪತ್ನಿತ್ವಕ್ಕೆ ಎಡೆ ಕೊಡುವುದಿದ್ದರೂ, ಹೈದರ್‌ಬಾದಿನ ಹಿಂದೂ ಸಮಾಜವು ದೊಡ್ಡ ಸಮಸ್ಯೆಯಲ್ಲಿ ಸಿಲುಕಿ ಬಿಟ್ಟಿದೆ.

**ಹತೋಟಿಗೆ ಸಿಗದ ತರುಣಿಯರು.**

೨. ತಂದೆ ತಾಯಿಗಳಿಗೆ, ಹಾಗೂ ಗಂಡಂದಿರಿಗೆ ತಮ್ಮ ಹುಡುಗಿಯರನ್ನೂ ಸ್ತ್ರೀಯರನ್ನೂ ಹತೋಟಿಯಲ್ಲಿಟ್ಟುಕೊಳ್ಳುವುದು ಬಹಳ ಕಷ್ಟವಾಗಿ ಪರಿಣಮಿಸಿದೆ. ಕತ್ತಲೆಯಲ್ಲೇ ಸ್ತ್ರೀಯರು ಓಂ ಮಂಡಲಿಗೆ ಸದ್ದಿಲ್ಲದೆ ಓಡಿ ಬಿಡುತ್ತಾರೆ. ಸಂದರ್ಭ ಸಿಕ್ಕಿದಾಗ ಅವರು ಮನೆಯಿಂದ ತಪ್ಪಿಸಿಕೊಳ್ಳಲು ಯತ್ನಿಸುತ್ತಾರೆ. ಗಂಡಸರ ಅಧಿಕಾರವನ್ನು ಪೂರ್ಣವಾಗಿ ಅಲ್ಲಗಳೆದು ಅನಾಹುತ ಮಾಡಲು ಅವರಿಗೆ ಎಡೆಸಿಕ್ಕಿದೆ.

**ನಿರ್ದಯ ಪುರುಷರು.**

೩. ಸ್ತ್ರೀಯರಿಗೆ ಒಂದು ವಿಚಿತ್ರ ಬೋಧನೆಯು ಕೊಡಲ್ಪಟ್ಟಿದೆ. ಪುರುಷರು ನಿರ್ದಯ ಪ್ರಾಣಿಗಳು, ರಾಕ್ಷಸರು, ರಾವಣರು ಎಂದು ಮೊದಲಾಗಿ ಮಂಡಲಿಯವರು ಕಲಿಸಿ, ದಿವ್ಯ ಜ್ಞಾನವನ್ನು ಸ್ತ್ರೀಯರು ಪಡೆಯದಿದ್ದರೆ ಅವರ ಜೀವನವು ವ್ಯರ್ಥ, ಅದನ್ನು ಪಡೆಯಲಿಕ್ಕಾಗಿ ಯಾರಿಗೂ ಅವಿಧೇಯತೆಯನ್ನು ತೋರಬಹುದು. ಈ ಅವ್ಯವಸ್ಥೆಯಿಂದಾಗಿ ಜನರು ಕೋರ್ಟುಗಳಿಗೆ ಹೋಗಿ ತಮ್ಮ ಅಪ್ರಾಯಸ್ಥ ಬಾಲಕಿಯರನ್ನು ತಮ್ಮ ಅಧೀನದಲ್ಲಿರಿಸಿಕೊಳ್ಳಲೆತ್ನಿಸುತ್ತಿದ್ದಾರೆ. ಪ್ರಾಯ ಬಂದ ಹುಡುಗಿಯರು ಅಂಥ ಸಂಘಗಳಿಗೆ ಹೋಗದಂತೆ ಮಾಡುವುದು ಅತ್ಯವಶ್ಯವಾದುದರಿಂದ ಅವರು ಈ ನವೀನ ಚಳವಳವನ್ನು ಎದುರಿಸುತ್ತಿದ್ದಾರೆ. ಇದರಿಂದಾಗಿ ಎಷ್ಟೋ ಮನೆಗಳು ಕಲಹದ ಬೀಡುಗಳಾಗಿ ಪರಿಣಮಿಸಿವೆ.

**ಲೇಖರಾಜರ ವಿಚಿತ್ರ ಶಕ್ತಿ.**

೪. ವಿಶ್ವಸನೀಯವಾಗಿ ತಿಳಿದು ಬಂದಿರುವಂತೆ ಓಂ ಮಂಡಲಿಯ ಸಂಸ್ಥಾಪಕರಾದ ಭಾಯಿೂ ಲೇಖರಾಜರು ಒಂದು ತರದ ಆಕರ್ಷಣಾ ಶಕ್ತಿಯನ್ನು ಹೊಂದಿರುವರೆಂದೂ ಇದರಿಂದಾಗಿ ಸಿಂಧಪ್ರಾಂತ್ಯದ ಹೆಚ್ಚಿನ ಸ್ತ್ರೀಯರು ಅವರೆಡೆಗೆ ಹೋಗುವಂತಾಗಿದೆಯೆಂದೂ ತಿಳಿಯಲಾಗಿದೆ. ಇದರ ಪರಿಣಾಮವಾಗಿ ತರುಣಿಯರು ತಮ್ಮ ಬಂಧು ಬಾಂಧವರ ಸಂಬಂಧವನ್ನು ಲೆಕ್ಕಿಸದೆ ಭಾಯಿೂ ಲೇಖರಾಜರ 'ಸತ್ಸಂಗ' ಮಾಡಲು ಅಲ್ಲಿಗೆ ತೆರಳುತ್ತಾರೆ. ಹತ್ತಾರು ಮಂದಿ ಭಾಯಿೂ ಲೇಖರಾಜರ ಮುಂದೆ ಭಕ್ತಿ ಪರವಶರಾಗಿ 'ಮೂರ್ಛೆ' ಹೋಗುತ್ತಾರೆ. ಕೆಲವರು ತಾಸು ತಾಸುಗಳ ತನಕ ಕೂಗುತ್ತಾ ಕಣ್ಣೀರು ಸುರಿಸುತ್ತಿರುತ್ತಾರೆ. ಇನ್ನು ಕೆಲವರು ಸಿಕ್ಕಾಬಟ್ಟೆ ನಗುತ್ತಾರೆ. ಮತ್ತೆ ಕೆಲವರು ತಾಸು ತಾಸುಗಳ ತನಕ ಸ್ಮೃತಿ ತಪ್ಪಿ ಬಿದ್ದು ಬಿಡುತ್ತಾರೆ. ಈ ಅವಸ್ಥೆಗೆ ಕಾರಣವೇನೆಂದು ಭಾಯಿೂ ಲೇಖರಾಜರೊಡನೆ ಕೇಳಿದರೆ ಅವರು "ಸಮಾಧಿ" ಯಲ್ಲಿದ್ದಾರೆಂದು ಅವರು ಉತ್ತರವೀಯುತ್ತಾರೆ. ತಾನು ಶ್ರೀಕೃಷ್ಣ ಪರಮಾತ್ಮನ ದರ್ಶನವನ್ನು ಪಡೆಯುತ್ತೇನೆಂದು ಕೆಲವೊಮ್ಮೆ ಲೇಖರಾಜರು ಹೇಳುವುದುಂಟು. "ಸಮಾಧಿ"ಯನ್ನೈದುವ ಕೆಲವರು ಹಾಗೆ ಮಾಡುವುದರಿಂದ ಮನಶ್ಶಾಂತಿಯನ್ನು ಪಡೆಯುತ್ತಾರೆನ್ನುತ್ತಾರೆ. ಇನ್ನು ಕೆಲವರು ಶೂನ್ಯ ಜಗತ್ತನ್ನು ಕಾಣುತ್ತಾರಂತೆ. ಏಳೆಂಟು ವರುಷ ಪ್ರಾಯದ ಮಕ್ಕಳು ಕೂಡಾ ಹೀಗೆ "ಸಮಾಧಿ"ಯನ್ನೈದುವುದುಂಟು.

ಭಾಯಿೂ ಲೇಖರಾಜರ ಪ್ರಭಾವವು ಎಷ್ಟು ಮಹತ್ವದ್ದೆಂದರೆ ಯಾರನ್ನಾದರೂ ಬಲತ್ಕಾರದಿಂದ ಓಂ ಮಂಡಲಿಯಿಂದ ದೂರವಿರಿಸಿದರೆ ಅಂಥವರು ಅವರನ್ನು ಮರೆಯುವುದೇ ಇಲ್ಲ. ಈ ಚಳವಳವು ದಿನಹೋಗುತ್ತಾ ಬಲಶೂನ್ಯವಾಗುತ್ತಾ ಬಂದರೂ, ಕೆಲವೊಮ್ಮೆ ಅದರ ಸದಸ್ಯರ ಸಂಖ್ಯೆಯು ಹೆಚ್ಚಿ ಬಿಡುವುದುಂಟು.

**ಸೇರಿದವರ ಪ್ರಕೃತಿ ಕ್ಷೀಣ!**

ಈ ಪ್ರಭಾವಕ್ಕೆ ಸಿಲುಕಿರುವ ಸ್ತ್ರೀಯರು ಭಾಯಿೂ ಲೇಖರಾಜರಂತೆಯೇ ಕ್ಷೀಣವಾಗಿ ಕಾಣುತ್ತಾರೆ. ಸತ್ಸಂಗಕ್ಕೆ ಸೇರಿದ ಸ್ತ್ರೀಯರು

ಕೃಶವಾಗುವುದಲ್ಲದೆ ಅವರ ಕಣ್ಣು ಗಳು ಆಳಕ್ಕೆ ಹೋಗುತ್ತವೆ.

೫. ಭಾಯಿೞ ಲೇಖರಾಜರು ಎಲ್ಲಾ ಹಿಂದೂ ಶಾಸ್ತ್ರಗಳನ್ನು ಹಳಿಯುತ್ತಾರೆ. ಸಿಂಧಿಗಳು ಹೆಚ್ಚಾಗಿ ನಾನಕ್ ಪಂಥದವರಾಗಿರುವುದರಿಂದ ಲೇಖರಾಜರು ಅದನ್ನು ಇಚ್ಛೆಬಂದಂತೆ ಖಂಡಿಸುವಾಗ ನಾನಕರ ಅನುಯಾಯಿಗಳು ಬೇಸರಕ್ಕೊಳಗಾಗುತ್ತಾರೆ. ನೋಡುವವರಿಗೆ ಭಾಯಿೞ ಲೇಖರಾಜರು ಗೀತೆಯ ಮೇಲೆಯೇ ಹೊಂದಿಕೊಂಡಿರುವರೆಂದು ಕಾಣುವುದಿದ್ದರೂ ಅವರು ತನ್ನ ಸ್ವಂತ ಅರ್ಥಗಳನ್ನು ಮಾಡಿಕೊಂಡಿರುತ್ತಾರೆ. ಕರ್ಮ ಮತ್ತು ಭಕ್ತಿ ಕಾಂಡಗಳು ಅವರಿಗೆ ರುಚಿಸುವುದಿಲ್ಲ. ಪರಮಾತ್ಮ ಸಾನ್ನಿಧ್ಯವನ್ನು ಪಡೆಯಲು ಯಾವ ಸಾಧನವೂ ಅವಶ್ಯವಿಲ್ಲವೆಂದು ಅವರ ಬೋಧನೆ.

## "ರಾಸಲೀಲೆ"

೬. ಭಾಯಿೞ ಲೇಖರಾಜರು ತನ್ನನ್ನು ಅವತಾರ ಪುರುಷರೆಂದು ಕರೆಯುತ್ತಾರೆ. ಇದನ್ನು ಸ್ಪಷ್ಟವಾಗಿ ಹೇಳುವುದಿದ್ದರೆ ಅವರ ಶಿಷ್ಯ ವರ್ಗದವರು ಲೇಖರಾಜರನ್ನು ಅವತಾರಪುರುಷರೆಂದೇ ಕರೆಯುತ್ತಾರೆ. ಅವರು ರಾಸಲೀಲೆಯನ್ನು ಆಗಾಗ ಮಾಡುತ್ತಿದ್ದಾರೆಂದು ಹಲವು ಆಧಾರಗಳು ದೊರಕಿವೆ.

## "ಕೌರವ-ಪಾಂಡವರು"

ಅವರ ಗೋಪಿಯರು ಹಾಡುತ್ತಾರೆ, ಕುಣಿಯುತ್ತಾರೆ, ಅವರೊಡನೆ ಕೂಡಿ ಕುಣಿಯುತ್ತಾರೆ ಅವರೊಟ್ಟಿಗೆ ಕುಳಿತುಕೊಳ್ಳುತ್ತಾರೆ. ಮುಟ್ಟಿ ಆಲಂಗಿಸುತ್ತಾರೆ. ಪರಸ್ಪರ ಬಾಯಿಗೆ ತಿಂಡಿಯನ್ನು ಇಟ್ಟುಕೊಳ್ಳುತ್ತಾರೆ. ಭಾಯಿೞ ಲೇಖರಾಜರು ಹೊಸತೊಂದು ಹೋಲಿಕೆಯನ್ನು ಮಾಡಲಾರಂಭಿಸಿದ್ದಾರೆ. ಅವರ ಗೋಪಿಯರು ಪಾಂಡವರು, ಜನತೆಯು ಕೌರವರೆಂಬುದೇ ಅವರ ಹೋಲಿಕೆಯ ಸಾರ. ಓಂ ಮಂಡಲಿಗೂ ಸಮಾಜಕ್ಕೂ ನಡೆಯುವ ಜಗಳವು ಮಹಾಭಾರತ ಯುದ್ಧವೆಂದೇ ಲೇಖರಾಜರ ಅಂಬೋಣ. ಜನತೆಯನ್ನು ಕೌರವರೆಂದು ಕರೆಯಲು ಮೂಲಕಾರಣವೆಂದರೆ ಜನರು ಅವರ ಓಂ ಮಂಡಲಿಯನ್ನು ವಿರೋಧಿಸುವುದು; "ಚರಿತ್ರೆಯು ಪುನರಾವರ್ತಿಸಲ್ಪಡುತ್ತಿದೆ" ಎಂದವರು ಹೇಳುವುದುಂಟು. ನಿಜವಾದ ಶ್ರೀ ಕೃಷ್ಣ ಪರಮಾತ್ಮನನ್ನು ಆರಾಧಿಸುವವರು ಈ ನವೀನ ಶ್ರೀ ಕೃಷ್ಣನ ಅವತಾರದಿಂದಾಗಿ ತುಂಬಾ ಮನನೊಂದಿದ್ದಾರೆಂದು ಹೇಳಬೇಕಾಗಿಲ್ಲ.

೭. ಭಾಯಿೞ ಲೇಖ ರಾಜರು ತನ್ನ ಮಂಡಲಿಯನ್ನು ಒಂದು ಆಸ್ಪತ್ರೆಯಾಗಿ ಮಾರ್ಪಡಿಸಿದ್ದಾರೆ. ಸ್ತ್ರೀಯರು ರಾತ್ರಿಹಗಲೆನ್ನದೆ ಅಲ್ಲಿದ್ದುಕೊಂಡು ಧರ್ಮಕ್ಕೆ ಊಟೋಪಚಾರಗಳನ್ನು ಪಡೆಯುತ್ತಿದ್ದಾರೆ.

ಅಲ್ಲಿಯ ಊಟವಗೈರೆಗಳ ಕಾರ್ಯಕ್ರಮವು ಕೆಳಗಿನಂತಿದೆ.

## ಆಹಾರ

ಪೂರ್ವಾಹ್ನ ೭ಕ್ಕೆ- ಹಾಲು

,, ೯ಕ್ಕೆ ಪೂರಿ, ಕ್ಷೀರ ಮೊದಲಾದುವುಗಳ ಭೂರಿ ಭೋಜನ.

ಅಪರಾಹ್ನ ೧ಕ್ಕೆ ಅನ್ನ, ಬ್ರೆಡ್, ಮತ್ತು ಹಲವು ಬಗೆಯ ತರಕಾರಿಗಳ ಊಟ.

ಅಪರಾಹ್ನ ೩ಕ್ಕೆ ಹಣ್ಣು ಹಂಪಲು

## ದೊರಗು ಬಟ್ಟೆಗಳಿಲ್ಲ! ಪರಿಮಳ ದ್ರವ್ಯಗಳು!

"೫ಕ್ಕೆ ಮಿಠಾಯಿ ಮೊದಲಾದುವುಗಳ ಉಪಾಹಾರ. ರಾತ್ರಿ ೯ಕ್ಕೆ ಊಟ-ಬ್ರೆಡ್ ಮತ್ತು ತರಕಾರಿಗಳು. ಪ್ರತಿದಿನ ಸುಮಾರು ೧೦೦ಕ್ಕಿಂತಲೂ ಹೆಚ್ಚು ಸ್ತ್ರೀಯರು ಆಶ್ರಮದಲ್ಲಿ ಊಟಮಾಡುತ್ತಿದ್ದಾರೆ. ಖದ್ದರಿನಂತಹ ದೊರಗು ಬಟ್ಟೆಯನ್ನು ಯಾರೂ ಧರಿಸಬಾರದು. ಪರಿಮಳದ ಸಾಬೂನುಗಳೂ ಪರಿಮಳ ದ್ರವ್ಯಗಳೂ ಧಾರಾಳವಾಗಿ ಉಪಯೋಗಿಸಲ್ಪಡುತ್ತವೆ. ತರುಣಿಯರು ತಮ್ಮ ಕಣ್ಣಿಗೆ ಕಾಡಿಗೆಯನ್ನು ಹಚ್ಚಿಕೊಳ್ಳುತ್ತಾರೆ.

ವಿಚಾರಣಾ ಸಮಿತಿಯು ನಡೆಸಿದ ವಿಚಾರಣೆಯಿಂದ ಓಂ ಮಂಡಲಿಯು ಅನೇಕ ದೃಷ್ಟಿಗಳಲ್ಲಿ ಸಂಶಯಾತ್ಮಕ ಸ್ವಭಾವದ್ದೆಂದು ಕಂಡು ಬಂದಿರುವುದರಿಂದ ಹಾಗೂ ಕಠಿನ ಸ್ವಭಾವದ ದೋಷಗಳು ಚಳವಳದವರಿಂದ ಮಾಡಲ್ಪಡುವುದರಿಂದ ಅದರ ಸಂಸ್ಥಾಪಕರೊಡನೆ ಮಾತಾಡಲೆಂದು ವಿಚಾರಣಾ ಸಮಿತಿಯವರು ನಿಶ್ಚೈಸಿದರು. ಭಾಯಿೞ ಲೇಖರಾಜರನ್ನು ಅನೇಕ ಬಾರಿ ಕಂಡು, ಜನತೆಯ ಇಚ್ಛೆಯಂತೆ ಅವರು ತಮ್ಮ ಚಳವಳದ ಕ್ರಮಗಳನ್ನು ವ್ಯತ್ಯಾಸಗೊಳಿಸಬೇಕೆಂದು ಕೇಳಿಕೊಂಡರು. ಆದರೆ ಲೇಖರಾಜರು ಯಾವ ಸೂಚನೆಯನ್ನೂ ಲಕ್ಷಿಸಲಿಲ್ಲ.

ಈ ಯತ್ನವು ನಿಷ್ಫಲವಾದ ಬಳಿಕ ಒಂದು ಪ್ರಾತಿನಿಧ್ಯವು ಸರಕಾರಕ್ಕೆ ಕಳುಹಿಸಲ್ಪಟ್ಟಿತು. ಈಪ್ರಾತಿನಿಧ್ಯಕ್ಕೆ ಸಾವಿರಾರು ಮಂದಿ ಸಹಿ ಹಾಕಿದರು. ಅಲ್ಲಿಯ ಜಿಲ್ಲಾ ಮೇಜಿಸ್ಟ್ರೇಟರು ಒಬ್ಬ ಸಿಂಧಿಯಾಗಿರುವುದರಿಂದ ಅವರು ಖಾಸಗಿಯಾಗಿ ಒಂದು ಸಂಧಿಯನ್ನು ಮಾಡಿ ಹಾಕಿದರು. ಈ ಸಂಧಿಯಿಂದ ಓಂ ಮಂಡಲಿಗೆ ತುಂಬಾ ಸಮರ್ಥನೆಯಿರುವುದಿದ್ದರೂ ಅದನ್ನು ಇತ್ತಂಡದವರೂ ತತ್ಕಾಲಕ್ಕೆ ಒಪ್ಪಿದರು. ಆದರೆ ಭಾಯಿ ಲೇಖರಾಜರು ಒಪ್ಪಂದದ ಪ್ರತಿಯೊಂದು ಶರ್ತವನ್ನು ಮುರಿದರು. ಇದರ ಪರಿಣಾಮವಾಗಿ. ಸಾರ್ವಜನಿಕರು ಓಂ ಮಂಡಲಿಯೆದುರು ಪಿಕೇಟಿಂಗ್ ಮಾಡಬೇಕಾಯಿತು. ಜಿಲ್ಲಾ ಮೆಜಿಸ್ಟ್ರೇಟರು ಇತ್ತಂಡದವರ ಮೇಲೂ ಸೆಕ್ಷನ್ ೧೦೭ ಕ್ರಿ. ಪ್ರೊ. ಕೋಡನ್ನು ಜಾರಿಮಾಡಿದುದರಿಂದ ಪಿಕೇಟಿಂಗನ್ನು ನಿಲ್ಲಿಸಬೇಕಾಯಿತು. ಇದರ ಪರಿಣಾಮವಾಗಿ ಈ ವ್ಯವಹರಣೆಯು ಕೋರ್ಟಿನ ಮುಂದಿದೆ.

ಮೇಲಿನದು ಓಂ ಮಂಡಲಿಯ ಸಮಸ್ಯೆಯ ಸಂಕ್ಷಿಪ್ತ ಚರಿತ್ರೆ. ಸಾರ್ವಜನಿಕ ಸಭೆ, ಪಂಚಾಯತುಗಳು, ಪ್ರಭಾತಫೇರಿಗಳೇ ಮೊದಲಾದುವುಗಳ ಮೂಲಕ ಓಂ ಮಂಡಲಿಯು ಹಾನಿಕಾರಕವೆಂದು ಚಳವಳ ಮಾಡಿಯಾಯಿತು. ಪತ್ರಿಕೆಗಳಲ್ಲಿ ಪ್ರಚಂಡ ಪ್ರಚಾರ ಕಾರ್ಯವನ್ನು ನಡೆಸಿಯಾಯಿತು. ಆದರೆ ಇವೆಲ್ಲವೂ ನಿಷ್ಫಲವಾಗಿವೆ. ಸಾರ್ವಜನಿಕರನ್ನು ಈ ಮಹಾವ್ಯಾಧಿಯಿಂದ ದೂರಮಾಡಬಲ್ಲ ಒಂದು ಉಪಾಯವು ಅತ್ಯವಶ್ಯವಾಗಿದೆ'

---

– – 'ದೀನಬಂಧು ನಿಧಿ'ಯು ಬಡವರ ಬಂಧು – –

ಸಂಗ್ರಾಹಕರು:
ಶ್ರೀ. ಹಯವದನ ರಾಯರು.

**ಬೊಂಬೇ ಟಾಕೀಸಿನ "ವಚನ" ಅತ್ಯಂತ ಯಶಸ್ವಿ ಚಿತ್ರ!**

ಬೊಂಬೇ ಟಾಕೀಸಿನವರು ತಯಾರಿಸಿದ "ವಚನ" ಚಿತ್ರವು ಅವರ ಹಿಂದಿನ ಎಲ್ಲಾ ಚಿತ್ರಗಳಿಗಿಂತ ಹೆಚ್ಚು ಸಂಪಾದನೆ ಮಾಡಿವೆಯೆಂದು ಅದರ ಜನರಲ್ ಮೆನೇಜರರಾದ ರಾಯ್ ಸಾಹೇಬ್ ಚೂನಿಲಾಲರು ಪ್ರಕಟಿಸಿದ್ದಾರೆ.



"ಸೀತಾ ಸ್ವಯಂವರ"ದ ಒಂದು ದೃಶ್ಯ.

ಮುಂಬಯಿಯ ಒಂದೇ ಥಿಯೇಟರಿನಲ್ಲಿ ಅದು ಹದಿನೈದು ವಾರಗಳ ತನಕ ಪ್ರದರ್ಶಿಸಲ್ಪಡುವುದೆಂದು ಪರೀಕ್ಷಿಸಲಾಗಿದೆ. ಮುಂಬಯಿ, ಕರಾಚಿ ಮೊದಲಾದೆಡೆಗಳಲ್ಲಿ ಈ ಚಿತ್ರವು ಅತ್ಯಂತ ಜನಪ್ರೀತವಾಗಿದೆ.

"ವಚನ"ದಲ್ಲಿ ದೇವಿಕಾ ರಾಣಿ, ಅಶೋಕ ಕುಮಾರ್ ಮೊದಲಾದವರು ಬಹಳ ಯಶಸ್ವಿಯಾಗಿ ನಟಿಸಿರುವುದಲ್ಲದೆ, ಅದರ ಕತೆಯು ಹುರಿದುಂಬಿಸುವ ಸ್ವಭಾವದ್ದಾದುದರಿಂದ ಉತ್ತರ ಹಿಂದುಸ್ಥಾನದಲ್ಲಿ ಕೂಡಾ ಈ ಚಿತ್ರವು ಬಹುಕಾಲ ಪ್ರದರ್ಶಿಸಲ್ಪಡಲಿದೆ.

○ ○ ○

**"ಧರತಿ ಮಾತಾ"ದ ಕಲಾ ವೈಭವ**

ನ್ಯೂ ಥಿಯೇಟರಿನವರ 'ಧರತಿ ಮಾತಾ' ಎಂಬ ಚಿತ್ರವು ಕಲಾ ದೃಷ್ಟಿಯಲ್ಲಿ ಕೊನೆಯ ಮಾತಾಗಿದೆಯೆಂದು ಮುಂಬಯಿ ಪತ್ರಿಕೆಗಳು ಅಭಿಪ್ರಾಯ ಪಟ್ಟಿವೆ. ಏಳು ವಾರಗಳಿಂದ ಈ ಚಿತ್ರವು ಮುಂಬಯಿಯಲ್ಲಿ ಪ್ರದರ್ಶಿಸಲ್ಪಡುತ್ತಿದೆ.

ಇದರ ಪ್ರತಿಯೊಂದು ದೃಶ್ಯಗಳೂ ಸ್ವಾಭಾವಿಕವಾಗಿವೆ. ನಿರ್ದೇಶನ ಮತ್ತು ಪ್ರಭಾ ಲೇಖನವನ್ನು ನಿತಿನ್ ಬೋಸ್‌ರವರು ಬಹು ಸೊಗಸಾಗಿ ನಿರ್ವಹಿಸಿದ್ದಾರೆ. ಪ್ರಸಿದ್ಧ ನಟನಟಿಯರಾದ ಸೈಗಲ್, ಉಮಾಶಶಿ, ಕಮಲೇಶ ಕುಮಾರಿ ಕೆ. ಸಿ.ಡೇ, ಜಗದೀಶ್, ನವಾಬ್ ಮೊದಲಾದವರು ಇದರಲ್ಲಿ ಅಭಿನಯಿಸಿದ್ದಾರೆ.

(ಇಲಸೇ ಪುಟ ನೋಡಿರಿ,)

# SUPPLY AGENCY

## BALANCE-SHEET A[cut off]

### CAPITAL AND LIABILITIES

| | | | |
|---|---|---|---|
| **CAPITAL:** | | | |
| Authorised & Issued: 5,000 Shares of Rs. 20/- each ... ... .. | | | 1,00,000 0 [illegible] |
| Subscribed & Paid-up: | | | |
| 1,515 Shares of Rs. 20/- each fully paid ... | | | 30,300 0 [illegible] |
| Reserve fund ... ... ... ... | | | 501 0 [illegible] |
| Dividend Equalisation fund ... ... ... | | | 100 0 [illegible] |
| Reserve for Bad & Doubtful Debts ... ... | | | 177 15 [illegible] |
| Deposits ... ... ... ... | | | 12,959 11 [illegible] |
| Interest on Deposits Due ... ... ... | | | 59 11 [illegible] |
| Dividends not drawn ... ... ... | | | 25 10 [illegible] |
| Overdraft with Bankers ... ... ... | | | 10,194 13 [illegible] |
| Loans ... ... ... .. ... | | | 5,172 [illegible] |
| Creditors: | | | |
| For Goods Supplied ... ... ... | | 1,358 0 8 | |
| For Expenses ... ... ... | | 1,326 11 1 | |
| For other Finance ... ... ... | | 2,472 2 6 | 5,156 [illegible] |
| Consignment goods as per contra ... ... | | | 629 [illegible] |
| Profit & Loss Account: | | | |
| Balance as per Last Balance Sheet ... ... | | 1,709 14 10 | |
| Less appropriations thereof | | | |
| Dividends ... ... | 1,371 6 11 | | |
| Reserve fund ... | 300 0 0 | 1,671 6 11 | |
| Balance ... ... | | 38 7 11 | |
| Profit for the year ... ... ... | | 2,268 4 4 | 2,306 [illegible] |

**Total Rs. 67,584**

# LIMITED, UDIPI.

## AT 30TH JUNE 1938.

### PROPERTY AND ASSETS

| | Rs. | a. | p. | Rs. | a. | p. |
|---|---|---|---|---|---|---|
| **FIXED CAPITAL EXPENITURE:** | | | | | | |
| Machinery at cost as per last Balance Sheet ... | 14,830 | 11 | 3 | | | |
| Additions during the year ... ... ... | 1,730 | 2 | 3 | | | |
| | 16,560 | 13 | 6 | | | |
| Less Depreciation to date ... ... ... | 188 | 11 | 3 | 16,372 | 2 | 3 |
| Furniture at cost as per last Balance Sheet ... | 6,117 | 0 | 8 | | | |
| Additions during the year ... ... ... | 2,039 | 5 | 0 | | | |
| | 8,156 | 5 | 8 | | | |
| Less depreciation to date ... ... ... | 516 | 5 | 8 | 7,640 | 0 | 0 |
| Electric fittings at cost as per last Balance Sheet ... | 349 | 9 | 9 | | | |
| Additions during the year ... ... ... | 275 | 0 | 0 | | | |
| | 624 | 9 | 9 | | | |
| Less depreciation to date ... ... ... | 24 | 9 | 9 | 600 | 0 | 0 |
| Types at cost as per last Balance Sheet ... | 11,071 | 10 | 1 | | | |
| Additions during the year ... ... ... | 182 | 7 | 6 | 11,254 | 1 | 7 |
| Stock-in-trade at cost ... ... ... | | | | 11,656 | 6 | 1 |
| Work-in-progress at cost ... ... ... | | | | 2,066 | 8 | 0 |
| Sundry stock at cost ... ... ... | | | | 590 | 12 | 0 |
| Consignment stock at cost ... ... ... | | | | 629 | 1 | 6 |
| Book debts considered good ... ... ... | 6,283 | 14 | 4 | | | |
| " " doubtful ... ... ... | 102 | 15 | 9 | 6,386 | 14 | 1 |
| Loans considered good ... ... ... | | | | 3,752 | 0 | 0 |
| Advances to Staff ... ... ... | | | | 3,804 | 11 | 6 |
| **INVESTMENTS:—** | | | | | | |
| Ten shares of C. I. & B. Syndicate Ltd., of Rs. 100/- each Rs. 30/- paid at cost ... | 610 | 0 | 0 | | | |
| 150 Shares of C. L. I. Ltd., of Rs. 10/- each fully paid at cost ... ... ... | 1,600 | 8 | 0 | | | |
| Sri Pejavar Mutt Promissory Notes ... ... | 165 | 0 | 0 | 2,375 | 8 | 0 |
| Interest receivable ... ... ... | | | | 64 | 7 | 3 |
| Cash on hand ... ... ... ... | | | | 391 | 12 | 11 |
| | | | **Total Rs.** | **67,584** | **5** | **2** |

### ಔದ್ಯೋಗಿಕ ಭಾರತ

"ಚಂದ್ರರಾವ್ ಮೋರೆ" "ಬಾಘ್‌ಬನ" ಮೊದಲಾದ ಚಿತ್ರ



ಬಾಂಬೇ ಟಾಕೀಸಿನ "ವಚನ" ಎಂಬ ಚಿತ್ರದಲ್ಲಿ ಅಭಿನಯಿಸಿರುವ

**ದೇವಿಕಾರಾಣಿ**

ಗಳನ್ನು ತಯಾರಿಸಿದ ಜನರಲ್ ಫಿಲ್ಮ್‌ನವರು "ಔದ್ಯೋಗಿಕ ಭಾರತ" ವೆಂಬ ಚಿತ್ರವನ್ನು ಸದ್ಯದಲ್ಲಿಯೇ ಹೊರತರಲಿದ್ದಾರೆ. ಶೋಭನಾ ಸಮರ್ಥಳು ಇದರಲ್ಲಿ ಅಭಿನಯಿಸಿದ್ದಾಳೆ. ವಿದ್ಯಾವತಿಯಾದ ಸುಂದರಿಯೊಬ್ಬಳು ಉದ್ಯೋಗ ಸಂಪಾದನೆಗಾಗಿ ಯತ್ನಿಸುತ್ತಾಳೆ. ಆದರೆ ಜನ್ಮನ ಸೌಂದರ್ಯಗಳಿದ್ದರೆ ಮಾತ್ರ ಆಧುನಿಕ ಜಗತ್ತಿನಲ್ಲಿ ಮುನ್ನಡೆಯಲಾಗುವುದಿಲ್ಲವೆಂದು ಅವಳಿಗೆ ಸ್ಪಷ್ಟವಾಗುತ್ತದೆ. ಕೊನೆಗೆ ಆಕೆಯು ಒಂದು ಫಿಲ್ಮ್ ಸ್ಟುಡಿಯೋವನ್ನು ಸೇರುತ್ತಾಳೆ. ಅಲ್ಲಿ ಅವಳ ಸಾಹಸಮಯ ಜೀವನವು ಪ್ರಾರಂಭವಾಗುತ್ತದೆ. ಈ ಚಿತ್ರದ ಸಾರಾಂಶವೆಂದರೆ ಸುಮ್ಮನೆ ಕಾಲಹರಣ ಮಾಡುವುದಕ್ಕಿಂತ ಔದ್ಯೋಗಿಕ ಸಂಸ್ಥೆಗಳನ್ನು ಪ್ರಾರಂಭಿಸಿ ಯಾವುದಾದರೊಂದು ಉದ್ಯೋಗವನ್ನು ಮಾಡುವುದುತ್ತಮವೆಂದಾಗಿದೆ. ಔದ್ಯೋಗಿಕ ಭಾರತವನ್ನು ನೋಡಿದವರಿಗೆ ಈ ಸೂಚನೆಯು ಪೂರ್ಣವಾಗಿ ಮನದಟ್ಟಾಗುತ್ತದೆ.

೦ ೦ ೦



ಫ್ರೆಡ್ಡಿ ಬಾರ್ಥಲೋಮ್ಯು ಮತ್ತು ಕ್ಲಾರ್ಕ್ ಗೇಬ್ಲ್

### "ಚೆಕ್ಕು"

ರಣಜಿತ್ ಕಂಪೆನಿಯವರ "ಚೆಕ್ಕು" ಎಂಬ ವಿನೋದಮಯ ಚಿತ್ರದಲ್ಲಿ ನಾಲ್ಕು ದಂಪತಿಗಳ ಸಾಹಸಮಯ ವೈವಾಹಿಕ ಜೀವನವು ಚಿತ್ರಿಸಲ್ಪಟ್ಟಿದೆ. ಇಂದಿನ ಸಮಾಜದಲ್ಲಿ ಜಾರಿಯಲ್ಲಿರುವ ವೈವಾಹಿಕ ಪದ್ಧತಿಗಳು ಅದೆಷ್ಟು ಅಯೋಗ್ಯವಾಗಿವೆಯೆಂಬುವನ್ನು ಈ ಚಿತ್ರವು ತೋರಿಸುತ್ತದೆ. ಮೊದಲು ಬೊಂಬೇ ಟಾಕೀಸಿನಲ್ಲಿದ್ದ ಸುನೀತಾದೇವಿ ಮತ್ತು ಇಳಾದೇವಿಯರು ಇದರಲ್ಲಿ ಕಾಲೇಜ್ ಹುಡುಗಿಯರ ಪಾತ್ರ ವಹಿಸಿದ್ದಾರೆ.

೦ ೦ ೦

### "ವಸಂತಿ"

ಮುಂಬಯಿಯ ಮಿನರ್ವಾ ಮುವಿಟೋನಿನವರು ಸದ್ಯದಲ್ಲಿಯೇ "ವಸಂತಿ" ಯೆಂಬ ಚಿತ್ರವನ್ನು ತಯಾರಿಸಲಿದ್ದಾರೆ. ಇದರಲ್ಲಿ ಮಾಧವರಾವ್ ಟೆಂಬೆ, ನಾಸೀಮ್ ಮೊದಲಾದವರು ಅಭಿನಯಿಸುವರು.



"ನೋಡಿ, ಆ ಹುಡುಗಿ ಹುಡುಗನಂತೆ ವೇಷಹಾಕಿ ಕೊಂಡಿರುವುದು. ನನಗದನ್ನು ನೋಡಿದರಾಗುವುದಿಲ್ಲ."

"ಅದು ನನ್ನ ಮಗು ಸ್ವಾಮಿ"

"ಓಹೋ, ನೀವವನ ತಂದೆಯೆಂದು ನನಗೆ ಗೊತ್ತಿದ್ದಿಲ್ಲ"

"ನಾನು ತಂದೆಯಲ್ಲ, ಅವನ ತಾಯಿ."



ಮೆನೇಜರ್: "ರಮೇಶರಾಯರೆ, ತಾವು ಹಾಡುತ್ತಿದ್ದಿರೇ?"

ಕ್ಲಾರ್ಕ್: "ಹೌದು"

ಮೆನೇಜರ್: "ಛೀ, ಹಾಡುವುದನ್ನು ನಿಲ್ಲಿಸಿ. ಮಧ್ಯಾಹ್ನದ ಹೋರ್ನೆಂದು ಭಾವಿಸಿ ಕೆಲಸದವರೆ ಹೋಗಲಾರಂಭಿಸಿದ್ದಾರೆ"



ಗಾರ್ಡ್: "ಈ ಪೆಟ್ಟಿಗೆ ಒಳಗೆ ಕೊಂಡುಹೋಗಲು ಸಾಧ್ಯವೇ ಇಲ್ಲ."

ಪೋರ್ಟರ್: ಓಹೋ, ನೀವು ಒಳಗೆ ಕೊಂಡು ಹೋಗಲು ಯತ್ನಿಸುತ್ತಿದ್ದೀರೋ, ಹ್ಹೇ! ನಾನು ಹೊರ ತೆರಲು ಪ್ರಯತ್ನಿಸುತ್ತಿದ್ದೆ.



"ನನ್ನ ಹೆಂಡತಿ ನನಗೆ ಕೊಂಡುಕೊಳ್ಳಲು ಸಾಧ್ಯವಿಲ್ಲದಿದ್ದುದನ್ನೇ ಕೇಳುವ ಸ್ವಭಾವದವಳು"

"ನನ್ನ ಹೆಂಡತಿ ಹಾಗೆಲ್ಲಾ ಮಾಡುವುದಿಲ್ಲ"

'ಮತ್ತೇನು ಮಾಡುತ್ತಾಳೆ?'

"ನನಗೆ ಅದು ಬೇಕೇ ಬೇಕೆಂದೆನ್ನುತ್ತಾಳೆ"



"ಹೆಚ್ಚಿನ ಸ್ಟೀಮರುಗಳಿಗೆ ಹೆಂಗಸರಂತೆ 'ನೇತ್ರಾವತಿ, ಭದ್ರಾವತಿ' ಮೊದಲಾದ ಹೆಸರಿಡುವುದೇಕೆ?"

"ಹೆಂಗಸರಂತೆ ಅವುಗಳನ್ನು ನಡೆಸುವುದು ಕಷ್ಟವಾಗುವುದರಿಂದ"

---

## ಹಾಜರಿ ರಿಜಿಸ್ತ್ರಿ

....ಊರಿನ ಸರಕಾರೀ ಆಫೀಸೊಂದರಲ್ಲಿ ಬೆಳಿಗ್ಗೆ ಗುಮಾಸ್ತರು ಬಂದೊಡನೆಯೇ ಹಾಜರಿ ರಿಜಿಸ್ತ್ರಿಯಲ್ಲಿ ಸಹಿಹಾಕಬೇಕೆಂಬ ನಿಯಮವಿತ್ತು. ಅದರಲ್ಲಿ ಮೂರು ಕಲಮುಗಳಿದ್ದುವು. ಸಹಿ, ತಲಪಿದ ಸಮಯ ಮತ್ತು ಷರಾ.

ಹತ್ತು ನಿಮಿಷಗಳ ಮೇಲೆ ಬಂದವರು ಷರಾ ಕಲಮಿನಲ್ಲಿ ತಡವಾದುದರ ಕಾರಣವನ್ನು ಬರೆಯಬೇಕಿತ್ತು.

....ಊರಿನಲ್ಲಿ ವಿಶೇಷವಾದ ಘಟನೆಯೊಂದು ನಡೆಯಿತೆಂದರೆ ತಡಮಾಡುವವರ ಸಂಖ್ಯೆಯು ವಿಶೇಷ ಏರುತ್ತಿತ್ತು. ಅದರಲ್ಲಿ ಮೊದಲನೆಯವನು ಷರಾ ಕಲಮಿನಲ್ಲಿ "ವಾಕೆ ಹೆಚ್ಚು" ಎಂದು ಬರೆದರೆ ಆ ಮೇಲೆ ಬಂದವರೆಲ್ಲಾ ಡಿಟ್ಟೋ (ಅಂದರೆ ಮೇಲಿನ ಕಾರಣದಿಂದಲೆ) ಎಂದು ಚುಟುಕಿನಲ್ಲಿ ತಮ್ಮ ಕಾರಣವನ್ನು ಮುಗಿಸುತ್ತಿದ್ದರು.

ಒಮ್ಮೆ ಒಬ್ಬ ಗುಮಾಸ್ತನು ತಡವಾಗಿ ಬಂದು "ಹೆಂಡತಿ ಅವಳಿ ಮಕ್ಕಳನ್ನು ಹೆತ್ತದ್ದರಿಂದ" ಎಂದು ಕಾರಣವನ್ನು ಸೂಚಿಸಿದನು. ಆ ಮೇಲೆ ಬಂದವರೆಲ್ಲಾ ಎಂದಿನಂತೆಯೇ ಡಿಟ್ಟೋ- ಡಿಟ್ಟೋ- ಎಂದು ಬರೆಯುತ್ತಾ ಹೋದರು.

---

## ವಚನಾಮೃತ

'ಸ್ವದೇಶಿಯೇ ಸ್ವಾರ್ಥದ ಉಗಮಸ್ಥಾನ'

.........

'ಜೀವವನ್ನು ದೇವರಿಗಿಂತ ಹೆಚ್ಚಾಗಿ ಪ್ರೀತಿಸು'

.........

'ದೇಶಸೇವೆಯೆಂದರೆ ಧನಿಕರು ಅಭಿನಯಿಸುವ ನಾಟಕ'

.........

'ಬೊಬ್ಬೆಯೂ ಆತುರತೆಯೂ ತಾತ್ಕಾಲಿಕ ಪ್ರಯೋಜನವನ್ನೀಯುತ್ತದೆ'

---

# ಮೊದಲಿಗರ ತೊದಲು

## ಸಂಧ್ಯಾಕಾಲ

ಕವಿ: ಶ್ರೀ. ಡಿ. ಸಿ. ಸಿಂಗ್, ಧರ್ಮಸ್ಥಳ.

ಪೂರ್ವದಿಂದ ಬಂದ ಸೂರ್ಯ
ಮೋನನಗೆಯ ನಗುತಲಿಬುವ
ಕತ್ತಲಲ್ಲಿ ಮುಗಿಸಿ ಕಾರ್ಯ
ಉಷೆಗೆ ಮುತ್ತನೊತ್ತುತಿರುವ ॥ ೧ ॥

ಮಕ್ಕಳೆಲ್ಲ ಆಟವಾಡಿ
ಸಂಜೆ ಸೊಬಗ ನೋಟನೋಡಿ
ಮೋದದಿಂದ ಕೂಡಿ ಹಾಡಿ
ಕುಣಿಯುತಿರುವ ಜೋಕೆ ನೋಡಿ ॥ ೨ ॥

ಶಾಲೆ ಮೈಲೆ ಬಿಚ್ಚಿಯಿಟ್ಟು
ಕೈಕಾಲು ತೊಳೆದು ಬಿಟ್ಟು
ನಾಮವಿಟ್ಟು ಭಜಿಸಲೊಟ್ಟು
ಬಾಲರೆಲ್ಲ ಸೇರುತಿಹರು ॥ ೩ ॥

ಹಿರಿಯ ಜನರು ನೆರೆಯ ಹೊರೆಯ
ಕಿರಿಯ ಮಕ್ಕಳೊಡನೆ ಕೂಡಿ
ದನಿಯ ಬೆರಸಿ ಹಾಡು ಹಾಡಿ
ಸಂಜೆವಣ್ಣ ಬೆಡಗ ನೋಡಿ ॥ ೪ ॥

ಕಿರಿಯರೀವ ಸ್ವಾಗತವನು
ಸ್ವೀಕರಿಸುತಲಿವರ ಹರಸಿ
ಬಯಕೆಯಿಹುದನೆಲ್ಲ ಸಲಿಸಿ
ನಲಿವ ಜನರ ನಲ್ಮೆವೆರಸಿ ॥ ೫ ॥

# ವಿಚಿತ್ರವಾದರೂ ಪೂರಾ ಸತ್ಯ

. . . . . . ಬೆಳಗಾಗಿತ್ತು.

ಇದು ಫ್ರೆಂಚ್ ಸರಕಾರ ಮತ್ತು ಒಂದು ಮರದ ಕಥೆ. ಪ್ರೊ. ಬಾರ್ಥಲೋಮ್ಯು ಎಂಬವರು ಈ ಕಥೆಯನ್ನು ಕಾಯಿದೆ ಕಲಿಯುವ ವಿದ್ಯಾರ್ಥಿಗಳಿಗೆ ಹೇಳಿದರು:

"ನೋಡಿ" ಎಂದು ಹೇಳಿ ಪ್ರೊಫೆಸರರು ಸರಕಾರದ ದೊಡ್ಡದೊಂದು ಪತ್ರವ್ಯವಹಾರದ ಫೈಲನ್ನು ತೋರಿಸಿ–"ಇದು ನಾನು ನಗರ ಸಭಾಧ್ಯಕ್ಷನಾಗಿರುವ ನಗರದಲ್ಲಿರುವ ಒಂದು ಮರದ ಚರಿತ್ರೆ. ಆ ಮರವು ಎಷ್ಟೋ ಅಧಿಕಾರಿಗಳಿಗೆ ಕೆಲಸವನ್ನೊದಗಿಸಿ ಕೊಟ್ಟಿದೆ.

"ಆ ಮರವು ಬಿರುಗಾಳಿಯಿಂದ ಉರುಳಿತು. ನಗರದಲ್ಲಿದ್ದುದರಿಂದ ಅದರ ಪ್ರಯೋಜನ ಎಷ್ಟಿರಬಹುದೆಂದು ನಾನು ಹೇಳಬೇಕಾಗಿಲ್ಲ. [illegible]ಕಟ್ಟಲಿಕ್ಕಾಗಿ ಸರಕಾರದವರು ಆ ಮರವನ್ನು ಕೊಂಡುಕೊಳ್ಳುತ್ತೇವೆಂದು ಹೇಳಿದರು. ನಗರ ಸಭೆಯವರು ಸರಕಾರದ ಬೇಡಿಕೆಗೆ ಸಮ್ಮತಿಸಲಾಗಿ ಪತ್ರವ್ಯವಹಾರವು [illegible]ದಿಂದ ನಡೆಯಿತು. ಆದರೆ ಇದಕ್ಕೆ ಸಂಬಂಧಪಟ್ಟ ಪತ್ರಗಳು ಎಲ್ಲಾ ಅಧಿಕಾರಿಗಳಿಗೆ ಹೋಗಿ ಬರುವಾಗ ಮರವು ಕುಂಬಾಗಿತ್ತು.

ಸಂಕ ಇಲಾಖೆಯವರು ಮರವು ನಿಷ್ಪ್ರಯೋಜಕವೆಂದು ತಿಳಿದು ಅದನ್ನು ಲೈಲಾಮು ಮಾಡಿದರು. [illegible]ನೆರಡು ಫ್ರಾಂಕುಗಳನ್ನು ಅವನು ಸರಕಾರಕ್ಕೆ ಕೊಡಬೇಕಾಯಿತು. ಲೈಲಾಮಿಗೆ ನಿಂತವನು ಮರವನ್ನು ಕೊಂಡುಹೋಗಲು ಬಂದಾಗ ಅದು ಅಲ್ಲಿರಲಿಲ್ಲ!

### ಸ್ತ್ರೀ ಟಾರ್ಝಾನಳನ್ನು ಹೆಣ್ಣುಕರಡಿಯು ಸಾಕಿತು.

ಟರ್ಕಿಯಲ್ಲಿರುವ ಎನಟಾಲಿಯ ತುರ್ಕಿ ಬೇಟೆಗಾರರು ಕಾಡಿನಲ್ಲಿ ಏಕಾಂಗಿನಿಯಾಗಿರುವ ಸ್ತ್ರೀ ಟಾರ್ಝಾನಳೊಬ್ಬಳನ್ನು ಕಂಡುಹಿಡಿದಿದ್ದಾರೆ. ಕೇವಲ ೫ ದಿನಾರು ವರುಷದವಳಾದರೂ ವನ್ಯ ಜಂತುಗಳೊಡನೆ ಆಕೆಯು ಜೀವಿಸಿದಳು. ಗಾಳಿ, ಮಳೆ, ಬಿಸಿಲುಗಳಿಂದ ಆಕೆಯು ಕಪ್ಪಾಗಿದ್ದಾಳೆ.

ಬೇಯಿಸಿದ ಆಹಾರವನ್ನು ಅವಳಿಗೆ ತಿನ್ನಲಾಗುವುದಿಲ್ಲ. ಯಾವ ಭಾಷೆಯ ಅರಿವೂ ಇಲ್ಲ. ಕೆಲವು ವರುಷಗಳ ಹಿಂದೆ ಎನಟಾಲಿಯದಿಂದ ಕಾಣೆಯಾದ ಇಬ್ಬರು ಹುಡುಗಿಯರಲ್ಲಿ ಇವಳೊಬ್ಬಳಾಗಿರಬಹುದೆಂದು ಅಲ್ಲಿಯ ಜನರು ಹೇಳತೊಡಗಿದ್ದಾರೆ.

### ತಲೆ ತುರಿಸಿದರು!

ಅಮೇರಿಕದ ವಿಮಾನಪಡೆಯನ್ನು ಪರೀಕ್ಷಿಸಲೆಂದು ಲೆಫ್ಟಿನೆಂಟ್ ಕರ್ನಲ್ ಎಡ್ವಾರ್ಡ್ ಟರ್ನರ್ ಎಂಬವರು ಪೋರ್ಟ್ ಹಾನ್ಕಾಕಿಗೆ ಹೋದರು. ಸಾಲಿನಲ್ಲಿ ನಿಂತಿದ್ದ ಸೈನಿಕರು ಸಲಾಮು ಮಾಡತೊಡಗಿದಾಗಲೆ ನುಸಿಗಳ ದೊಡ್ಡದೊಂದು ತಂಡವು ಬಂದು ಅವರ ಕಿವಿ ತಲೆ ಮೊದಲಾದುವುಗಳನ್ನು ಮುತ್ತಿದುವು. ಸೈನಿಕರು ತುರಿಸಲಾರಂಭಿಸಿದರು. ಕರ್ನಲ್ ಸಾಹೇಬರು ಬೇಸರದಿಂದ ತನ್ನ "ಪರೀಕ್ಷೆಯನ್ನು ಮುಂದರಿಸಿದರು.

### ಟೆಲಿಫೋನಿನಿಂದ ನೋಡುವುದು!

ನ್ಯೂಯಾರ್ಕಿನ ವೈಜ್ಞಾನಿಕನೊಬ್ಬನು ಒಂದು ಟೆಲಿವಿಝನ್ ಟೆಲಿಫೋನನ್ನು ಕಂಡುಹಿಡಿದಿದ್ದಾನೆ. ಈ ಯಂತ್ರದ ಶೋಧನಾಕಾರ್ಯವು ಪೂರ್ಣವಾದರೆ ಅಮೇರಿಕದ ತರುಣಿಯೊಡನೆ ಮಂಗಳೂರಿನವರು ಯಾವ ತೊಂದರೆಯೂ ಇಲ್ಲದೆ ಸರಸ ಸಲ್ಲಾಪ ಮಾಡಬಹುದಾಗಿದೆ!

### ಆಹಾರ ಪರೀಕ್ಷಿಸಲು ಮೈಕ್ರೋಸ್ಕಾಪ್!

ಹಾಲಿಗೆ ನೀರು ಮಿಶ್ರಮಾಡುವುದೇ ಮೊದಲಾದ ಮೋಸಗಳನ್ನು ಕಂಡುಹಿಡಿಯುವ ಮೈಕ್ರೋಸ್ಕಾಪ್ ಯಂತ್ರಗಳನ್ನು ಫ್ರೆಂಚ್ ವೈಜ್ಞಾನಿಕರು ಕಂಡುಹಿಡಿದಿದ್ದಾರೆ. ಆದರಿಂದ ನೋಡಿದೊಡನೆಯೇ ಶುದ್ಧಾಶುದ್ಧತೆಯು ಸ್ಪಷ್ಟವಾಗುತ್ತದೆ.

### ಪ್ರಾಯಸ್ಥರಿಗೆ ಪೆನ್ಶನ್!

ನ್ಯೂಝಿಲೇಂಡಿನಲ್ಲಿ ಹೊಸ

ಕಾಯಿದೆಯೊಂದು ಜಾರಿಗೆ ಬಂದಿರುವುದರಿಂದ ಅನೇಕ ವೃದ್ಧರಿಗೆ ಸಂತೋಷವಾಗಲಾರಂಭಿಸಿದೆ. ೭೦ ವರ್ಷ ದಾಟಿದ ವೃದ್ಧರಿಗೆ ಸರಕಾರವು ವಾರಕ್ಕೊಂದು ಪವನಿನಂತೆ ಪೆನ್ಶನ್ ಕೊಡುತ್ತಿದೆ. ಎಲ್ಲರಿಗೂ ಧರ್ಮಾಸ್ಪತ್ರೆಗಳು ಸರಕಾರದಿಂದ ಒದಗಿಸಲ್ಪಟ್ಟಿವೆ.

**ವಿಚಿತ್ರ ದೂರು.**

ದಕ್ಷಿಣ ಕೆರೋಲಿನದ ಪೋಲೀಸ್ ಠಾಣೆಗೆ ಒಂದು ದೂರು ತಂತಿಯಮೂಲಕ ಹೋಯಿತು. ನಗರದ ಮುಖ್ಯ ಬೀದಿಯಲ್ಲಿ ಯಾರೋ ಪ್ರಚಂಡವೇಗದಿಂದ ಮೋಟಾರು ನಡೆಸುತ್ತಿದ್ದಾನೆಂದು ಆ ದೂರಿನ ಸಾರಾಂಶ. ಕೂಡಲೆ ಪೋಲೀಸಿನವರು ಅವನನ್ನು ಹಿಡಿಯ ಬೇಕೆಂದಾ ಜ್ಞೆಯಾಯಿತು. ವೇಗದಿಂದ ತಿರುಗುತ್ತಿದ್ದವನ ಮೋಟಾರ್‌ಕಾರಿನ ನಂಬರಾವುದೆಂದು ಕೇಳಿದೊಡನೆಯೇ ಪೋಲೀಸಿನವರು ಅವನ ಮೋಟಾರನ್ನು ಹುಡುಕುತ್ತಾ ಹೋದರು. ನಿರಾಶರಾಗಿ ಹಿಂತಿರುಗಿ ತಮ್ಮ ಕಾರಿನ ಲೈಸೆನ್ಸು ನಂಬರು ನೋಡುವಾಗ ಅದು ಅವರದೇ ಆಗಿತ್ತು!

**ಡಾರ್ವಿನಿನ ಹಾರುವ ಮೊಸಳೆ!**

ಆಸ್ಟ್ರೇಲಿಯದ ಡಾರ್ವಿನ್ ನಗರದಿಂದ ಎಡಲ್ಫೈಡಿಗೆ ಒಂದು ಮೊಸಳೆಯು ಸದ್ಯದಲ್ಲಿಯೇ ಹಾರುವುದರಲ್ಲಿದೆ. ಡಾರ್ವಿನಿನಿಂದ ಎಡಲ್ಫೈಡಿಗೆ ೨೦೦೦ ಮೈಲು ದೂರ. ಈ ಮೊಸಳೆಯನ್ನು ಮೆಲ್ಬೋರ್ನಿನ ಒಂದು ಪ್ರದರ್ಶನಾಲಯಕ್ಕೆ ವಿಮಾನದಲ್ಲಿ ಕೊಂಡೊಯ್ಯುವರು. ಇದರೊಡನೆ ವಿಚಿತ್ರ ಮೀನು, ಕಪ್ಪೆ, ಏಡಿ ಮೊದಲಾದುವುಗಳು ಕೂಡಾ ಅಲ್ಲಿಗೊಯ್ಯಲ್ಪಡುವುವು.

---

**ಗೊತ್ತಿದೆಯೆ?**

ಪರಿಶುದ್ಧವಾದ ನೀರಿನಲ್ಲಿ ಮೀನು ಸಾಯುತ್ತದೆ. ಬಾವಿಯ ನೀರು ಕೂಡಾ ಪೂರ್ಣ ಶುದ್ಧವಲ್ಲ!

# “ಲಲಿತಾ”

ಲೇಖಕರು: – – – – ಜಿ. ಎಸ್. ಹುಕ್ಕೇರಿ, ಧಾರವಾಡ

‘ಏನು ಸ್ವಾಮಿ, ಬಿಲ್ಲಿಯನ್ನು ಕೊಟ್ಟು ಎಷ್ಟು ‘ಪಾನ ಪಟ್ಟಿ’ಗಳನ್ನು ತೆಗೆದುಕೊಳ್ಳುತ್ತೀರಿ? ಬಿಲ್ಲಿಗೆ ಎರಡು ಮಾತ್ರ ಗೊತ್ತಿಲ್ಲವೇ’ ಎನ್ನಲು ಆ ಗೃಹಸ್ಥನು ತಪ್ಪಾದವನಂತೆ ನಟಿಸಿ ಮೂರನೇ ಪಾನಪಟ್ಟಿಯನ್ನು ಅಂಗಡಿಕಾರನಿಗೆ ಕೊಟ್ಟು ಜೇಬಿನಲ್ಲಿಯ ‘ಬಿಲ್ಲಿ’ಯನ್ನು ಆತನ ಮುಂದೆ ಇಟ್ಟು ಕ್ಷಣವೂ ವಿಳಂಬ ಮಾಡದೆ ಅಲ್ಲಿಂದ ಹೊರಟು ಹೋದನು. ಆಗ ರಾತ್ರಿ ಏಳೂವರೆ ಘಂಟೆಯಾಗಿತ್ತು. ವಿಜಯ ಟಾಕೀಜದಲ್ಲಿಯ ಚಿತ್ರಪಟವು ಒಂದು ತಾನಸಿ ವರೆಗೆ ನಡೆದು ನೋಟಕರ ನೇತ್ರಗಳಿಗೆ ಅಲ್ಪಾವಕಾಶದ ಬಿಡುವನ್ನು ಕೊಟ್ಟಿತ್ತು. ಅಂದು ಶನಿವಾರ. ಮೇಲಾಗಿ ಇಂಗ್ಲಿಷ್ ಆಟವಾದ್ದರಿಂದ ನೂರಾರು ನೂತನಯುಗದ ಜನರು ಕೂಡಿದ್ದರು. ‘ಇಂಟರ್‌ವಲ್’ ಆಗಲು ಎಲ್ಲರೂ ಚಹಾ ಮುಂತಾದವುಗಳಿಗೆ ಧಾವಿಸುವಂತೆ ಆ ಗೃಹಸ್ಥನೂ ‘ಪಾನಪಟ್ಟಿ’ಗಳನ್ನು ತೆಗೆದುಕೊಳ್ಳಲು ಬಂದಿದ್ದನು.

ಅವನ ಉಡುಪುಗಳನ್ನು ನೋಡಿದರೆ ಗುಜರಾತ ದೇಶದವನಂತೆ ತೋರುತ್ತಿದ್ದನು. ಉದ್ದವಾದ ಪಾರ್ಸಿ ಕೋಟು, ನೆಕ್‌ಟಾಯಿ ‘ಆ ಪೇಟೆಂಟ್ ಕಲರಿನ’ ಶೂಜಗಳು ಆತನ ವೈಭವವನ್ನು ಸೂಚಿಸುತ್ತಿದ್ದವು. ಅಂತಹ ದೊಡ್ಡ ಮನುಷ್ಯನನ್ನು ನಮ್ಮ ಬೀಡಿ ಅಂಗಡಿಯ ಇಮಾಮ ಸಾಹೇಬನು ಹೆದರಿಸಿದ್ದನ್ನು ನೋಡಿ ನನಗೆ ನಮ್ಮ ಸೀಮೆಯವರ ಸೌಜನ್ಯದ ವಿಷಯವಾಗಿ ಕೌತುಕ ಉಂಟಾಯಿತು. ಮನಸ್ಸು ಮಾಡಿದ್ದರೆ ಇಮಾಮ ಸಾಹೇಬನ ಅಂಗಡಿಯನ್ನು ಕೊಳ್ಳುವಂತಹ ಆ ಮನುಷ್ಯನು ತನ್ನಿಂದ ತಪ್ಪಾದುದರಿಂದ ಅದನ್ನು ನಿರ್ದಾಕ್ಷಿಣ್ಯದಿಂದ ಒಪ್ಪಿಕೊಂಡದ್ದರಿಂದ ಆತನ ಶಿಷ್ಟತನವು ನನ್ನಲ್ಲಿ ಆತನ ವಿಷಯವಾಗಿ ಆದರ ಭಾವವನ್ನುಂಟುಮಾಡಿತು. ಅಷ್ಟರಲ್ಲಿ ಮತ್ತೆ ಆಟವು ಪ್ರಾರಂಭವಾದ್ದರಿಂದ ಎಲ್ಲರೂ ಒಳಗೆ ಹೋದರು. ನಾನು ಆತನಾರೆಂದು ಕೇಳಬೇಕೆಂದು ಅಲ್ಲಿಯೇ ಓಡಾಡುತ್ತಿದ್ದ ಮೆನೇಜರರನ್ನು ಕೇಳಿದೆ–ಆ ಮನುಷ್ಯನು ಯಾರೆಂಬುದನ್ನು ತಾವು ಬಲ್ಲಿರಾ?

‘ಅವರೇ! ಆಗಲೇ ಹೋದರಲ್ಲ! ಅವರು ಸರ್ದಾರ ಮಾಧವರಾಯರ ಮಕ್ಕಳು. ರಾಜಾಪುರದವರು. ದಕ್ಷಿಣಕ್ಕೆ ಪ್ರವಾಸದ ದೆಸೆಯಿಂದ ಬಂದಿರುವರು.’

‘ಹೀಗೋ’ ಎಂದು ನಾನು ಆತನಿಗೆ ಥ್ಯಾಂಕ್ಸ್ ಕೊಟ್ಟು ನನ್ನ ಜಾಗೆಯ ಮೇಲೆ ಕುಳಿತುಕೊಂಡೆನು.



ಸಿನೇಮಾ ಬಿಟ್ಟಮೇಲೆ ಆ ಗೃಹಸ್ಥನು ಒಂದು ಮೋಟಾರು ಹತ್ತಿಕೊಂಡು ಹೋದನು. ನಾನು ನನ್ನ ಬೈಸಿಕಲ್ ಹತ್ತಿ ಮನೆಯ ಕಡೆಗೆ ಹೊರಟೆನು. ಮನಸ್ಸಿನಲ್ಲಿ ಆತನ ಮೂರ್ತಿ, ಆ ವಿನಯತನ, ಆ ವೈಭವದ ವಿಚಾರಗಳೇ ವಿಚಾರಗಳು. ನಮ್ಮ ಮನೆಯು ಊರಿನಿಂದ ಸ್ವಲ್ಪದೂರವಿದ್ದುದರಿಂದ ವಿಚಾರಮಾಡಲಿಕ್ಕೆ ಅವಕಾಶವಿತ್ತು. ನಾನು ಆಗ ಇಂಟರ್ ಆರ್ಟ್ಸ್‌ದಲ್ಲಿ ಓದುತ್ತಿದ್ದೆ. ನಮ್ಮ ತಂದೆಯು ಊರಲ್ಲಿ ಒಬ್ಬ ಪ್ರಸಿದ್ಧ ಶ್ರೀಮಂತ ಗೃಹಸ್ಥನಾಗಿದ್ದನು. ಪ್ರತಿಷ್ಠಿತ ಹುದ್ದೇದಾರನೂ ಆಗಿದ್ದನು. ನಮ್ಮಲ್ಲಿಯ ಹುದ್ದೇದಾರರೆಲ್ಲ ಊರ ಹೊರಗೆ ಬಂಗ್ಲೆಗಳನ್ನು ಕಟ್ಟಿಕೊಂಡು ಇರುತ್ತಿದ್ದರು. ಅದಕ್ಕೆ ‘ಎಕ್ಸ್‌ಟೆನ್‌ಶನ್’ ಎನ್ನುತ್ತಾರೆ. ಒಬ್ಬನೇ ಮಗನಾದುದರಿಂದ ತಂದೆಯು ನನಗೆ ಯಾವ ಮಾತಿನ ಕೊರತೆಯನ್ನು ಮಾಡಿರಲಿಲ್ಲ. ತಂದೆಯ ಸಹಾಯದ ಉಪಯೋಗವನ್ನು ನಾನು ದುರುಪಯೋಗ ಮಾಡಿದ್ದಿಲ್ಲ. ಪ್ರತಿಯೊಂದು ತರಗತಿಯಲ್ಲಿಯೂ ಉಚ್ಚ ತರಗತಿಯಲ್ಲಿ ಉತ್ತೀರ್ಣನಾಗಿದ್ದೆ.

ಅಂದು ಮನೆಗೆ ಹೊರಟಾಗ ಎರಡು ವಿಚಾರಗಳು ನನ್ನ ತಲೆಯಲ್ಲಿ ಇದ್ದವು. ಒಂದು ನಮ್ಮ ಇಮಾಮ ಸಾಹೇಬನ ಉದ್ಧತ ವರ್ತನ. ಎರಡನೇದು ಲಲಿತೆಯು ಸಿನೇಮಕ್ಕೆ ಬರುತ್ತೇನೆಂದು ಹೇಳಿ ತಪ್ಪಿಸಿದ್ದು. ಮೊದಲನೇದಕ್ಕಿಂತಲೂ ಎರಡನೇ ವಿಷಯದ ವಿಚಾರವು ನನ್ನ ಮನಸ್ಸಿಗೆ ಹಳಹಳಿಯನ್ನುಂಟುಮಾಡಿತ್ತು. ಲಲಿತೆಯು ನಮ್ಮ ಮನೆಯ ಹತ್ತಿರ ಇರುವ ಒಬ್ಬ ಗೃಹಸ್ಥನ ಮಗಳು. ನನ್ನ ಜೊತೆಯಲ್ಲಿ ಕೂಡಿ ಕಲಿಯುತ್ತಿದ್ದುದರಿಂದ ಗುರುತು. ಕಾಲೇಜಿನ ಗುರುತು. ಹೆಣ್ಣುಮಕ್ಕಳ ಜೊತೆಯಲ್ಲಿ ಗೆಳೆತನ ಮಾಡಬೇಕು, ಮಾಡಿದರೆ ಬಿಡಬಾರದು. ಹೆಂಗಸರ ಗೆಳೆತನವು ನೆಚ್ಚಿನದಲ್ಲದಿದ್ದರೂ ಮರುಳ ಗಂಡಸರು ನೆಚ್ಚಿನದೆಂದು ನಂಬಿ ಮೋಸ ಹೋಗುವುದು ವಾಡಿಕೆಯಾಗಿದೆ. ಇದಕ್ಕೆ ಅನ್ನುತ್ತಾರೆ ಮೋಹವೆಂದು. ಹೀಗೆ ನಾನು ವಿಚಾ

ಸುತ್ತ ಎಷ್ಟು ದಾರಿ ಕ್ರಮಿಸಿಡೆನೆಂಬುದನ್ನು ಮರೆತು ಬಿಟ್ಟೆನು. ದಾರಿಯಲ್ಲಿ ಒಂದು ಮೋಟಾರು ನಿಂತಿದ್ದನ್ನು ಕಂಡ ಕೂಡಲೇ ನನ್ನ ವಿಚಾರಗಳು ಮುಗಿದವು. ಮೋಟಾರು ದೀಪಗಳನ್ನು ಕಂಡೊಡನೆಯೇ ಅಲ್ಲಿಯ ಪರಿಸ್ಥಿತಿಯ ಕಲ್ಪನೆಯು ಆಯಿತು. ಎರಡು ಮೋಟಾರುಗಳು 'ಡಿಕ್ಕೀ' ಹೊಡೆದಿದ್ದವು. ಹತ್ತಿರ ಹೋಗಿ ನೋಡಲಾಗಿ ಒಬ್ಬ ಗೃಹಸ್ಥನು ಆ ಮೋಟಾರದಲ್ಲಿಯ ಒಂದು ವ್ಯಕ್ತಿಗೆ 'ಬ್ಯಾಂಡೀಜು' ಬಿಗಿಯುತ್ತಿರುವುದು ಕಂಡಿತು. ಏನು ಆತನಾರು? ಸರ್ದಾರ.—ಮತ್ತೊಬ್ಬಳು ಲಲಿತೆ.

'ಲಲಿತೆ'! ನಾನೆಂದೆನು. ಅಹುದು ಲಲಿತೆಯೇ, ಸರ್ದಾರರ ದರ್ಶನಕ್ಕೆಂದು ಅವರ ಬಂಗ್ಲೆಯ ಕಡೆಗೆ ಹೊರಟದ್ದೆವು. ಲಲಿತೆಯೇ ಮೋಟಾರು ನಡಿಸುತ್ತಿದ್ದಳು. ಅನುಭವ ಇಲ್ಲದ್ದರಿಂದ ಪ್ರಮಾದವು ಸಂಭವಿಸಿತು' ಮೋಟಾರಿನಲ್ಲಿ ಕುಳಿತವನು ಹೇಳಿದನು. ಆತನು ಬೇರೆ ಯಾರೂ ಆಗಿರದೆ ಲಲಿತೆಯ ತಂದೆಯಾದ ಮೋಹನರಾಯನಾಗಿದ್ದನು.

'ಪೆಟ್ಟು ಬಲವಾಗಿದೆಯೇ'? ನಾನು ಕೇಳಿದೆನು.

'ಚಿಂತಿಸುವ ಕಾರಣವಿಲ್ಲ' ಸರದಾರನು ಹೇಳಿದನು.

ಕೂಡಲೇ ಅವಳನ್ನು ಬದಿಯಲ್ಲಿಯ ದವಾಖಾನೆಗೆ ಕೊಂಡು ಹೋದರು. ನಾನೂ ಹೋದೆ. ಡಾಕ್ಟರರು ಗಾಯ ತೊಳೆದು ಕಟ್ಟಿ ವಿಶ್ರಾಂತಿ ತೆಗೆದುಕೊಳ್ಳಲು ಹೇಳಿದರು. ಆದ್ದರಿಂದ ತಿರುಗಿ ಮನೆಗೆ ಹೋದೆ. ರಾತ್ರಿ ಕನಸಿನಲ್ಲಿ ಸರದಾರನು ಲಲಿತೆಯ ಕೂಡ ರಮಿಸುತ್ತಿರುವುದನ್ನು ಕಂಡು ಗಾಬರಿಯಿಂದ ಕಣ್ಣು ತೆರೆದೆ. ಸರದಾರನು ಯಾರು? ಸರದಾರನಿಗಾಗಿ ಲಲಿತೆಯು ಸಿನೇಮಾ ನೋಡುವುದಕ್ಕೆ ತಪ್ಪಿಸಿದ್ದಳೇ.... ? ಏನೋ, ಏನೂ ತಿಳಿಯದಾಯಿತು.



ಮರುದಿನ ಬೆಳಿಗ್ಗೆ ಲಲಿತೆಯನ್ನು ಕಾಣುವುದಕ್ಕೆ ಹೋಗಿದ್ದೆ. ಆಗ ಅವಳು ಮೋಲ್ಮಂದಿರದ ಮುಂದಣ ಪಡಸಾಲೆಯಲ್ಲಿ ಒಂದು ಆರಾಮ ಕುರ್ಚಿಯ ಮೇಲೆ ಕುಳಿತುಕೊಂಡು ವೃತ್ತ ಪತ್ರಿಕೆಯನ್ನು ನೋಡತೊಡಗಿದ್ದಳು. ನಾನು ಬಂದದ್ದು ಕಂಡು:

'ಬಂದಿಯಾ ವಸಂತ ಎಂದಳು.'

'ಲಲಿತೆ, ಪ್ರಕೃತಿ ಹೇಗಿದೆ?'

'ನೆಟ್ಟಗಿದೆ. ವಸಂತ, ನಿನ್ನೆ ನಿನಗೆ ಸಿನೆಮಾ ನೋಡಲಿಕ್ಕೆ ಬರುವುದಿಲ್ಲವೆಂದು ಯಾಕೆ ಹೇಳಿದನೆಂದು ತಿಳಿದಿರಲಿಕ್ಕಿಲ್ಲ.'

'ಇಲ್ಲ, ಲಲಿತ, ತಿಳಿಯಿತು. ನಿಮ್ಮ ತಂದೆಯು ಹೇಳಿದನು. ಆದರೆ ಸರದಾರನು ಯಾರು?'

'ಆತನು ನಮ್ಮ ತಂದೆಯ ಗೆಳೆಯನ ಮಗನಂತೆ. ಪುಣ್ಯ ನಗರದವನು. ದೂರ ಬಂದಿರುವವನು ದೇಶ ನೋಡಲಿಕ್ಕೆ ಹೊರಟಿರುವನೆಂದು ಸುದ್ದಿ. ಗುರುತು ಕಾಣಲಿಕ್ಕೆಂದು ಹೋಗಿದ್ದೆವು.'

'ಮುಂದಿನ ಸಂಗತಿಯು ತಿಳಿಯಿತು' ಎಂದು ನಾನಂದೆ.

'ವಸಂತ' ಲಲಿತೆಯೆಂದಳು- 'ಸಿನೇಮಾ ಹೇಗಾಯಿತು?' 'ನೆಟ್ಟಗಾಯಿತು' 'ಇಂದು ಟಾಕೀಜಕ್ಕೆ ಹೋಗುತ್ತಿಯೇನು?' 'ಹೋಗಲೇ ಬೇಕು. ನಿನಗೆ ಗೊತ್ತಿಲ್ಲವೇ, ಇಂದು ನಮ್ಮ ಸೋಶಿಯಲ್ ಗ್ಯಾದರಿಂಗ್.'

"ಗ್ಯಾದರಿಂಗ್" ಎಂದ ಕೂಡಲೇ ಲಲಿತೆಯು ಏನೋ ವಿಚಾರಕ್ಕೊಳಗಾದಳು. ಅವಳು ಮೌನಳಾದ್ದನ್ನು ಕಂಡು ನಾನು ಹೇಳಿದೆ. 'ಲಲಿತ, ನೀನು ವಿಚಾರಿಸುವುದು ನನಗೆ ತಿಳಿಯಿತು! ಗ್ಯಾದರಿಂಗದ ಕಾಲಕ್ಕೆ ನೀನು ನಾಟಕದಲ್ಲಿ ಪಾತ್ರವಹಿಸುವವಳಿದ್ದಿ ಅಲ್ಲವೇ! ಅಂದು ನನ್ನ ಆಗ್ರಹದಿಂದ ನೀನು ಒಪ್ಪಿದ್ದಿ, ಆದರೆ—'

'—ಆದರೆ ವಸಂತ, ಅಪಘಾತವಾದದ್ದರಿಂದ ನಾನು ನಿರಾಶಳಾಗಬೇಕಾಯಿತು. ಆ ಬಗ್ಗೆ ದುಃಖವಾಗುತ್ತದೆ.'

'ಲಲಿತ.'

'ಏನು ವಸಂತ.'

'ನಾನು ನಿನ್ನೆಯೊಂದು ಕನಸು ಕಂಡೆನು. ನಮ್ಮ ಸುಖಮಯ ಸ್ನೇಹವನ್ನು ಮಣ್ಣುಗೂಡಿಸುವ ಒಂದು ಘಟನೆ ನಡೆಯಿತು.'

'ನೀವು ಗಂಡಸರು....'ಎಂದು ಲಲಿತೆಯೆಂದಳು.

'ಗಂಡಸರಾದರೇನಾಯಿತು?'

'ಗಂಡಸರು ಬಹಳ ಸಂಶಯ ಸ್ವಭಾವದವರು. ವಸಂತ, ನಿನ್ನ ಅಭಿಪ್ರಾಯವು ನನಗೆ ತಿಳಿಯಿತು. ಸರದಾರನು ನಾಲ್ಕು ದಿವಸ ಮಾತ್ರ ಇರಲು ಬಂದವನು ತಿಳಿಯಿತೇ?'

'ಲಲಿತ. ನಾನು ನಿನ್ನ ನಂಬಲೇ? ನಾವೂ ನಾಲ್ಕು ದಿನದವರಲ್ಲವೇ'

'ನಂಬದಿರಲಿಕ್ಕೆ ಈಗ ಏನಾಯಿತು. ವಸಂತ, ನಾವು

ನಾಲ್ಕು ದಿನದವರಾದರೂ ನಮ್ಮ ಸ್ನೇಹವು ಅಚಲವಾದುದು.'

ಈ ಪ್ರಕಾರ ನಾವು ಮಾತನಾಡುತ್ತಿರಲು ದೂರದಲ್ಲಿ ಒಂದು ಮೋಟಾರು ಲಲಿತೆಯ ಮನೆಯ ಕಡೆಗೆ ಬರುತ್ತಿರುವುದು ಕಂಡಿತು. ಆ ಮೋಟಾರನ್ನು ನೋಡಿ ಲಲಿತೆಯು-

'ವಸಂತ, ಸರದಾರನು ಬರುತ್ತಿರುವನು' ಎಂದಳು, 'ನಾನಿನ್ನು ಹೊರಡಲೇನು?'

'ಅದೇಕೆ ವಸಂತ, ಸರದಾರನು ಬಂದರೆ ನೀನು ಹೋಗಬೇಕೊ?' ಎಂದು ಲಲಿತೆಯು ಹೇಳುತ್ತಿರಲು ಯಾರೋ ಒಬ್ಬರು ಅಟ್ಟದ ಮೇಲೆ ಬರುತ್ತಿರುವ ಕಾಲು ಸಪ್ಪಳ ಕೇಳಿಸಿತು. ನಾನು ಹೊರಳಿ ನೋಡಿದೆ. ಲಲಿತೆಯ ತಂದೆಯು ಗಡಿಬಿಡಿಯಿಂದ ಬಂದನು. ಆತನು ನನ್ನನ್ನು ಕಂಡು ಯಾಕೋ ವಿಚಿತ್ರ ವದನದವನಾದನು. ಆ ಮುಖಮುದ್ರೆಯಿಂದ ಅಲ್ಲಿ ನಾನಿರುವನು ಆತನಿಗೆ ಒಪ್ಪಿತವಿಲ್ಲವೆಂದು ತಿಳಿದು ಬರುತ್ತಿತ್ತು. ತಾನೇನೋ ಹೇಳಲು ಬಂದವನು ನನ್ನನ್ನು ಕಂಡು ಹೇಳದೆ ಸುಮ್ಮನಾದನು. ಮತ್ತೂ ಹಾಗೇ ಕೆಳಗಿಳಿದು ಹೋದನು. ಸ್ವಲ್ಪಾವಕಾಶದಲ್ಲಿ ಸರದಾರನು ಬಂದನು. ಲಲಿತೆಯು ಸರದಾರನನ್ನು ನನಗೆ ಪರಿಚಯ ಮಾಡಿ ಕೊಟ್ಟಳು. ಲಲಿತೆಯು ಹೇಳುತ್ತಿರುವಂತೆ ಸರದಾರನು ನಾಲ್ಕು ದಿವಸ ಇರುವವನಾಗಿದ್ದನು. ಆ ಊರಲ್ಲಿ ಆಗ ಪ್ರಕೃತಿಯನ್ನು ವಿಚಾರಿಸಲು ಬಂದಿದ್ದನು. ಉಪಚಾರದ ಮಾತುಗಳಾದ ಮೇಲೆ ನಾನು ಆತನಿಗೆ ಅಂದಿನ ರಾತ್ರಿ ನಮ್ಮ ನಾಟಕ ನೋಡಲು ಬರಹೇಳಿದೆ-ಆಮಂತ್ರಣ ಕೊಟ್ಟೆ. ಆತನು ಆ ಬಗ್ಗೆ ನನ್ನ ಆಭಾರ ಮನ್ನಿಸಿದನು.

ರಾತ್ರಿ ನಾಟಕವಾಯಿತು. ಲಲಿತೆಯೇ ಮುಖ್ಯಪಾತ್ರ ವಹಿಸುವವಳಿದ್ದರಿಂದ ನಾನು ಉತ್ಸಾಹಿತನಾಗಿ ಸಿದ್ಧತೆ ಮಾಡಿಕೊಂಡಿದ್ದೆ. ಆದರೆ ಅಪಘಾತವಾಗಿ ಲಲಿತೆಯು ಪಾತ್ರವಹಿಸುವದಿಲ್ಲವೆಂದು ಗೊತ್ತಾದ್ದರಿಂದ ನನಗೆ ನಿರುತ್ಸಾಹವು ಬಂತು. ಅಭಿನಯವಾಯಿತು. ಆದರಲ್ಲಿ ರಸವಿರಲಿಲ್ಲ, ಜೀವಕಳೆ ಇರಲಿಲ್ಲ. ಲಲಿತೆ ನೋಟಕಳಾದ್ದರಿಂದ ತಕ್ಕಷ್ಟು ಚೆನ್ನಾಯಿತು. ಅವಳು ಬಾರದೇ ಇದ್ದರೆ ನಾಟಕವೇ ಆಗುತ್ತಿರಲಿಲ್ಲ-ಅಲ್ಲ, ನಾನು ಪಾತ್ರವನ್ನೇ ವಹಿಸುತ್ತಿರಲಿಲ್ಲ.



ನಾಲ್ಕು ದಿನದ ಸರದಾರನು ನಾಲ್ವತ್ತು ದಿನವಾದರೂ ಕವಲದಿದ್ದುದನ್ನು ಕಂಡು ನನಗೆ ಸಂಶಯ ಉಂಟಾಯಿತು. ಲಲಿತೆಯ ತಂದೆಯು ಲಲಿತೆಯನ್ನು ಸರದಾರನಿಗೆ ಕೊಟ್ಟು ಮದುವೆ ಮಾಡುತ್ತಾರೆಂಬ ಸುದ್ದಿಯನ್ನು ಕೇಳಿಯಂತೂ ನನಗೆ ಪರಮಾವಧಿ ದುಃಖವಾಯಿತು. ಹೀಗೆಯೇ ಕೊನೆಯ ವರೆಗೆ ಕುದಿಯುತ್ತ ಕೂಡುವಕ್ಕಿಂತ ಸಾಕ್ಷ ಮೋಕ್ಷ ಮಾಡಿಬಿಡಬೇಕೆಂದು ಕೆಲವು ದಿನದ ಮೇಲೆ ಒಂದು ದಿನ ಲಲಿತೆಯ ಮನೆಯ ಕಡೆಗೆ ಹೋದೆ. ಆಗ ಆ ಮನೆಯ ಬಾಗಿಲವು ಇಕ್ಕಿತ್ತು. ಕೇಳಿದೆ, ಸೇವಕರು ಹೇಳಿದರು. ಸರದಾರನನ್ನು ಕಳಿಸಲು ರಾಯರೂ-ಲಲಿತೆಯೂ ಪುಣ್ಯನಗರಕ್ಕೆ ಹೋಗಿರುವರೆಂದು ತಿಳಿಯಿತು. ಆ ವಿಚಾರದ ಪೂರ್ಣ ಕಲ್ಪನೆಯಾಯಿತು. ಲಲಿತೆಯು ಕೈಬಿಟ್ಟಳೆಂದು ತಿಳಿದೆ. ಆಗ ಆ ಒಂಭತ್ತು ಗಂಟೆ ಮುಂಜಾವು ನನಗೆ ಜಗತ್ತೇ ಶೂನ್ಯವೆಂಬಂತೆ ತೋರ ಹತ್ತಿತು. ಚಳಿಗಾಳದ ದಿನವಾಗಿದ್ದರೂ ಜೋರನೇ ಬೆವೆತು ಬಿಟ್ಟೆ. 'ನಾಲ್ಕು ದಿನದ ಸರದಾರ' ಎಂದು ಲಲಿತೆಯೇ ಹೇಳುತ್ತಿದ್ದಳು. ಈಗ.... ಈಗೇನು? ನಾಲ್ಕು ದಿನ, ಅಹುದು ಇಡೀ ಜಗತ್ತೆ ನಾಲ್ಕು ದಿನದ್ದು. ಆದರೆ, ಆ ನಾಲ್ಕೇ ದಿನಗಳಲ್ಲಿ ಮನುಷ್ಯನು ಎಷ್ಟು ಪ್ರಚಂಡ ಕ್ರಾಂತಿಯನ್ನು ಮಾಡುತ್ತಾನಲ್ಲ. ನಾಲ್ಕು ದಿನದ ಸಂಸಾರ. ಅದನ್ನೇಕೆ ನಂಬಬೇಕು-ನಂಬಬಾರದೇ- ಏಕೆ ನಂಬಬಾರದು? ನಾವು ನಾಲ್ಕೇ ದಿನದವರು, ತಿಳಿಯದಾಯಿತು.' ಹಾಗೇ ತಿರುಗುವಲ್ಲಿ ಅಂಚೆಯವನು ಒಂದು ಪತ್ರತಂದು ಕೊಟ್ಟನು. ಯಾರದು ಪತ್ರವೆಂದು ಓದಿದೆ—

ಪುಣ್ಯನಗರ

ಪ್ರಿಯ ವಸಂತನಿಗೆ—

ಲಲಿತೆಯು ಬರೆಯುವದೇನಂದರೆ- ಸರದಾರನನ್ನು ಕಳಿಸಲಿಕ್ಕೆಂದು ಕರತಂದು ನನ್ನ ಲಗ್ನಮಾಡಿ ಬಿಡುವುದರಲ್ಲಿದ್ದಾರೆ. ನಾಳೆಯೇ ಮುಹೂರ್ತವೆಂದು ನಿಶ್ಚಯ ಮಾಡಿದ್ದಾರೆ ವಸಂತ. ನಾನು ನಿನ್ನಲ್ಲಿ ಸ್ನೇಹವನ್ನು, ಅಪಕ್ಕನುಸಾರವಾಗಿ ಪ್ರಣಯವನ್ನು ತಳೆದಿರುವೆನೆಂದು ಸ್ಪಷ್ಟವಾಗಿ ಹೇಳಿದ್ದರೂ ಈ ಜನರು ಕೇಳಲಾರರು. ನಾಲ್ಕು ದಿನದ ಸಂಸಾರದಲ್ಲಿ ನಾಲ್ಕೇ ದಿನವಿರಬೇಕಾದರೂ ಸಂಕಟ - ಜುಲುಮೆಯಿಂದ ತ್ರಸ್ತಳಾಗಿರಲು ನಾನು ಅಪೇಕ್ಷಿಸಲಾರೆ. ಆದುದರಿಂದ ಪ್ರಿಯ ವಸಂತ. ಆ

**ಸಂಕಟ** ಜುಲುಮೆಗಳಿಲ್ಲದ ಸ್ಥಳಕ್ಕೆ ಹೋಗುತ್ತೇನೆ. ನಾವು ನಾಲ್ಕು ದಿನದವರು. ಆದರೆ ನಮ್ಮ ಸ್ನೇಹವು-ಪ್ರೇಮವು ಅಚಲವಾದದ್ದು.-

—ಲಲಿತೆ

ಪತ್ರವನ್ನು ಓದುತ್ತಲೇ ನನಗೆ ದಿಕ್ಕು ತೋಚದಂತಾಯಿತು. ನಾನು 'ಲಲಿತೆ ಲಲಿತೆ' ಎಂದೆನು. ಆ ನನ್ನ ಕೂಗಿಗೆ ಯಾರು ಉತ್ತರ ಕೊಡಬೇಕು? ದಾರಿಯಲ್ಲಿ ಹೋಗುವರೊಬ್ಬರು ಮಾತ್ರ ನನ್ನ ಕಡೆಗೆ ಹುಳು ಹುಳು ನೋಡಿದರು-



ಕೂಡಲೇ ಪುಣ್ಯನಗರಕ್ಕೆ ಧಾವಿಸಿದೆ. ನಾನು ಆ ಊರಿಗೆ ಹೋಗುವಾಗ ಮೂರೂಸಂಜೆಯಾಗಿತ್ತು. ಸರದಾರನ ಮನೆಗೆ ಹೋಗುವಾಗ ರಾತ್ರಿಯಾಯಿತು. ಆ ಭವನವನ್ನು ಕಾಣುತ್ತಲೇ ನನ್ನ ಆತುರವು ಹೆಚ್ಚಾಯಿತು. 'ಲಲಿತೆ! ಲಲಿತೆ ಎಲ್ಲಿ!' ಎಂದು ಎಲ್ಲರನ್ನು ಕೂಗಿದೆ,—ಕೇಳಿದೆ.—ಯಾರೂ ಮಾತನಾಡದವರಾಗಿದ್ದರು. ಎಲ್ಲೆಡೆಗಳಲ್ಲಿಯೂ ಮೌನಸಾಮ್ರಾಜ್ಯವು ಆವರಿಸಿತ್ತು. ಸರದಾರನು ಮಾತ್ರ ಮೇಲ್ಮಂದಿರದ ಪಡಸಾಲೆಯಲ್ಲಿ ನಿಂತು ದೂರ ಕ್ಷಿತಿಜದ ಕಡೆಗೆ ನೋಡುತ್ತಿದ್ದನು. ಆತನನ್ನು ಕೇಳಿದೆ. 'ಲಲಿತೆ ಎಲ್ಲಿ?'

ಆತನು ಮಾತನಾಡಲಿಲ್ಲ. ಕ್ಷಿತಿಜದ ಕಡೆಗೆ ಕೈ ಮಾಡಿ ತೋರಿಸಿದನು. ದೂರ ನಗರದಾಚೆ ಉರಿಯುತ್ತಿರುವ ಚಿತೆಯೊಂದು ಕಂಡಿತು. ಅದನ್ನು ಕಾಣುತ್ತಲೇ ನಾನು 'ಸರದಾರ—ಸರದಾರ' ಎಂದೆನು. ಸರದಾರನ ಕಣ್ಣುಗಳಿಂದ ಧಾರೆ ಧಾರೆಯಾಗಿ ಅಶ್ರುಗಳುದುರುತ್ತಿದ್ದವು.

---

# ಈ ವಾರದ ಪಂಚಾಂಗ

**ಬಹುಧಾನ್ಯ ಸಂ|ರದ ಆಶ್ವಿನ ಶುಕ್ಲಪಕ್ಷ ದಕ್ಷಿಣಾಯನಂ ಶರದೃತುಃ**

**ಕನ್ಯಾ (ನಿರ್ನಾಲ) ೧೬ರಿಂದ ೨೨ರ ವರೆಗೆ. ಮಹಾನಕ್ಷತ್ರ—ಹಸ್ತಾ**

## ಆರ್ಯಭಟ ವಾಕ್ಯಕರಣರೀತ್ಯಾ ನಿತ್ಯಪಂಚಾಂಗಂ

| ತಾ. | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 2 | ೮ | ರ೩||| | ಪೂಷಾ೩೨| | ಶೋ೭ | ಬ೩||| | ೫೪| | ೧೮||| | ಮಕರೆಚ೪೮|||ಹ್ತ೧ಬು೩೫ ಮನ್ವಾ. |
| 3 | ೯ | ಚ೯ | ಉಷಾ೩೮|| | ಅ್ತ೮|| | ಕೌ೯ | ೪೯|| | ೨೦||| | ಹ್ತ೩ರ೪೬ ಹು೪ಕು೩೩ ಮಹಾ. |
| 4 | ೧೦ | ಕು೧೩||| | ಶ್ರ೪೪|| | ಸ್ಕು೯||| | ಗ೧೩||| | ೫೫|| | ೧೬. | ಹ್ತ೨ಬು೩೨ವಿಜಯ:೧೦ಪು. ವಿಸರ್ಜ. ಶಮೀದರ್ಶನಂಸೋಮಪದಕಾ.ಸ್ನಾ |
| 5 | ೧೧ | ಬು೧೮| | ಧ೫೦ | ಧೃ೧೦||| | ಭ೧೮| | ೦ | ೨೧||| | ಕುಂಭೆಚ೧೭| ವಿ೪ವೃಶ್ಚಿಕೆಶು೯§ [§ಸರ್ವೈಕಾ. ಪ. ಜಾಗರಪೂಜಾ |
| 6 | ೧೨ | ಗು೨೧||| | ಶ್ತ೫೪|| | ಶೂ೧೧ | ಬಾ೭೧||| | ೯|| | ೩೫| | ಹ್ತ೩ಬು೯ದ್ವಿದಲವೃತ ಮಾ.ಮೃ. |
| 7 | ೧೩ | ಶು೨೪| | ಪೂಭಾ೫೭||| | ಗ೧೦| | ತೈ೨೪| | ೧೦| | ೩೬||| | ಹ್ತ೪ರ೯ ಮೀನೆಚ೪ ೨ |
| 8 | ೧೪ | ಶ೨೫| | ಉಭಾ೫೯||| | ವೃ೮||| | ವ೨೫| | ೨೬|| | ೪೭|| | ಉ್ತ೧ಕು೪೭ಹ್ತ೪ಬು೨೬ |

## ಕೇತಕೀ ದೃಕ್ಸಿದ್ಧರೀತ್ಯಾ ನಿತ್ಯಪಂಚಾಂಗಂ

| ತಾ. | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 2 | ೮ | ರ| | ಪೂ.ಷಾ.೨೮ | ಶೋ೧||| | ಬ| | ೫೦|| | ೧೪|| | ಮಕರೆಚ೪೪|| ಹ೧ಬು೪೭ ವೃಶ್ಚಿಕೆ ಶುಕ್ರ:೫೫ವಿ೨ರಾಭ೪ಕೆ೫ಂಮನ್ವಾ |
| 3 | ೯ | ಚ೬|| | ಉ.ಷಾ.೩೫|| | ಅ್ತ೪ | ಕೌ೬|| | ೪೬|| | ೧೭|| | ಹ೩ರ೩೧ ಪೂ೪ಕು೩೩ ನವರಾತ್ರ ಮಾಪ್ತಿಃ ಬೌದ್ಧ ಜಯಂತೀ |
| 4 | ೧೦ | ಕು೧೨ | ಶ್ರ೪೧||| | ಸ್ಕು೫|| | ಗ೧೨ | ೫೨||| | ೧೩ | ಹ೨ಬು೪೯ ವಿಜಯಾ೧೦ ವಿದ್ಯಾಗ ಶಾರದಾವಿಸರ್ಜನಂ ದೇವೀವಿಸರ್ಜ. |
| 5 | ೧೧ | ಬು೧೬||| | ಧ೪೭| | ಧೃ೭ | ಭ೧ ||| | ೦ | ೧೯ | ಕುಂಭೆಚ೧೪|| ಸರ್ವೇಷಾಂ೧೧ |
| 6 | ೧೨ | ಗು೨೦ | ಶ್ತ೫೧|| | ಶೂ೭ | ಬಾ೨೦ | ೬||| | ೩೨| | ಹ೪ರ೫೪ಹ೩ಬು೩೧ವ್ಯ ಪ್ರ೮ |೨. ೨೨||ಪ್ರದೋಷಃ |
| 7 | ೧೩ | ಶು೨೧|| | ಪೂ.ಭಾ೫೪| | ಗಂ೬ | ತೈ೨೧|| | ೮| | ೩೩| | ಮೀನೆಚ೩೮||ಅ್ನ೧ಶು೩೯ |
| 8 | ೧೪ | ಶ೨೨|| | ಉಭಾ೫೫|| | ವೃ೩|| | ವ೨೨|| | ೧೮||| | ೪೩| | ಉ್ತ೧ಕು೪೮ ಹ೪ಬು೨೫ |

# ಈ ವಾರದಲ್ಲಿ ನಿಮ್ಮ ಭವಿಷ್ಯ ಹೇಗಿದೆ?



**ತಾರೀಕು ೨-೧೦-೧೯೩೮ರಿಂದ**
**ತಾರೀಕು ೮-೧೦-೧೯೩೮ರ ವರೆಗೆ.**



**ಮೇಷ:** —

ಪ್ರಕೃತಿಯು ಬಹಳಮಟ್ಟಿಗೆ ಸುಧಾರಿಸಿರುವುದು. ನೀನೀ ವಾರದಲ್ಲಿ ಹಣದ ಮಟ್ಟಿಗೆ ಚೆನ್ನಾಗಿ ದೃಷ್ಟಿಯನ್ನಿಡಬೇಕಾಗಿದೆ. ಯಾಕೆಂದರೆ ಧನಲಾಭವಾಗುವ ಅನೇಕ ಸಂದರ್ಭಗಳು ಇವೆ. ಇಷ್ಟಿದ್ದರೂ ಶೋಕದಾಯಕಗಳಾದ ಅನೇಕ ಅನರ್ಥ ಪರಂಪರೆಗಳು ನಿಮ್ಮ ಬೆನ್ನು ಹಿಡಿದಿವೆ. ಇವುಗಳ ಸಲುವಾಗಿ ಧನವ್ಯಯದ ದಾರಿಗಳು ಹೆಚ್ಚುವವು. ಇಷ್ಟ ಕಾರ್ಯಗಳು ಸಿದ್ಧಿಯನ್ನು ಹೊಂದುವವು. ಔದ್ಯೋಗಿಕ ಭಾಗದಲ್ಲಿ ಅಭಿವೃದ್ಧಿಯಿದೆ. ಸಾಂಪತ್ತಿಕ ಭಾಗಗಳು ಕೂಡಾ ಚೆನ್ನಾಗಿವೆ. ಸಂಪನ್ನಸ್ತ್ರೀಯೋರ್ವಳು ನಿಮ್ಮವಳಾಗಲಿರುವಳು. ತಾ. ೩ರಿಂದ ೭ರ ವರೆಗಿನ ದಿನಗಳು ಅತ್ಯನುಕೂಲಗಳಾಗಿವೆ. ಇಷ್ಟಸಿದ್ಧಿ, ಸುಖ, ಮಿತ್ರಸಮಾಗಮ, ನಾನಾರೀತಿಯಿಂದ ಲಾಭ.

**ವೃಷಭ:** —

ಪ್ರಕೃತದಲ್ಲಿ ನಿಮ್ಮ ಆರೋಗ್ಯವು ಕೆಟ್ಟಿರುವುದರಿಂದ ದೇಹಪೀಡೆಯು ಹೆಚ್ಚಾಗಿ ಬಹಳ ಕಷ್ಟಪಡಬೇಕಾಗುವದು. ನಿಮ್ಮ ಮನಸ್ಸು ಬಹಳ ಕಠಿನವಿರುವುದು. ಈ ವಾರದಲ್ಲಿ ನೀವು ಪ್ರಭುತ್ವವನ್ನು ಸಂಪಾದಿಸುವಿರಿ. ಯಾವ ಕಾರ್ಯಗಳನ್ನು ಹೇಗೆ ಮಾಡಿದರೆ ಅದು ನಿರ್ವಿಘ್ನದಿಂದ ಕೊನೆಗಾಣುತ್ತೆಂಬ ವಿವೇಕ ಶಕ್ತಿಯು ನಿಮ್ಮಲ್ಲಿರುವುದು. ಬಲವಂತರಾದ ಶತ್ರುಗಳ ಪೀಡೆಯು ನಿಮಗೆ ಹೆಜ್ಜೆ ಹೆಜ್ಜೆಗೂ ತಪ್ಪಿದ್ದಲ್ಲವು. ಅಲ್ಪ ಜನರಿಂದಲೂ ಮತ್ತು ಅಬಲೆಯರಿಂದಲೂ ಕೂಡಾ ನಿಮಗೆ ಅನಿಷ್ಟಗಳು, ಅಶುಭಗಳು ಆಗಲಿವೆ. ಗೃಹಚ್ಛಿದ್ರದಿಂದಾಗಿ ಸಂಸಾರದಲ್ಲಿ ಕಲಹವು ಹೆಚ್ಚುವುದು. ಅನೇಕ ರೀತಿಯಿಂದ ಧನಾಗಮವೂ ಆಗುವುದು.

**ಮಿಥುನ:** —

ಕಾಲಗತಿಯನ್ನು ಮೀರಲು ಯಾರಿಂದಲೂ ಶಕ್ಯವಲ್ಲವು. ಆದ ಕಾರಣ ಈ ವಾರದಲ್ಲಿ ನಿಮಗೆ ಕುಜ ಹೊರತಾದ ಸಕಲ ಗೃಹರೂ ಪ್ರತಿಕೂಲರಾಗಿರುವುದರಿಂದ ನಾನಾರೀತಿಯಲ್ಲಿ ಕಷ್ಟನಷ್ಟಗಳಿಗೆ ಗುರಿಯಾಗುವಿರಿ. ಶರೀರ ಪ್ರಕೃತಿಯು ಸಂಪೂರ್ಣ ಕೆಡುವುದರಿಂದ ಹಿಂದೆಂದೂ ಅನುಭವಿಸದ ಶರೀರ ಪೀಡೆಯನ್ನು ಈ ವಾರದಲ್ಲಿ ಅನುಭವಿಸುವಿರಿ. ಹಣದ ಭಾಗದಲ್ಲಿ ನಿಮಗೆ ಕೈಕಟ್ಟಿ ಮಾನವನ್ನು ರಕ್ಷಿಸಿಕೊಳ್ಳುವುದೇ ಬಹಳ ಕಷ್ಟಕ್ಕೆ ಬರುವುದು. ಪ್ರವಾಸದಲ್ಲಿ ಬಹಳ ಅನಿಷ್ಟಗಳು ಸಂಭವಿಸುವವು. ಶತ್ರುಗಳು ನಾನಾ ರೀತಿಯಲ್ಲಿ ಪೀಡಿಸುವದರಿಂದಲೂ ಶರೀರತಾಪದಿಂದಲೂ ಅತ್ಯಂತ ಶೋಕಾಕುಲಿತರಾದ ನಿಮಗೆ ದಿನವು ವರ್ಷದಂತೆ ಭಾಸವಾಗುವದು. ತಾ. ೨ ಮತ್ತು ೮ ಈ ದಿನಗಳಲ್ಲಿ ಮಿತ್ರಲಾಭ, ಸ್ಥಾನಪ್ರಾಪ್ತಿ.

**ಕರ್ಕಾಟಕ:** --

ರಾಜಕೀಯ ಸಂಬಂಧವಾದ ಕಾರ್ಯಗಳಲ್ಲೂ ಕೋರ್ಟು ಕಚೇರಿಗಳ ವಿವಾದಗಳಲ್ಲೂ ನೀವು ಈ ವಾರ ಕೈಹಾಕಬೇಡಿ. ಪರಿಸ್ಥಿತಿಯು ಪ್ರತಿಕೂಲವಾಗಿದೆ. ಶತ್ರುಗಳನ್ನು ಬಗ್ಗುಬಡೆಯಲು ನೀವು ಸಮರ್ಥರಿರುವಿರಿ. ಈ ಭಾಗದಲ್ಲಿ ನಿಮಗೆ ಮಿತ್ರರೂ ಕೂಡ ತುಂಬ ಅನುಕೂಲವಾಗಿದ್ದಾರೆ. ದೇಹದ ಅಂಗಾಂಗಗಳಲ್ಲಿ ನೋವು ಕಂಡು ಬಂದೀತು. ಮಾತ್ರವಲ್ಲ, ಉಷ್ಣ ಪಿತ್ಥ ಸಂಬಂಧವಾದ ರೋಗಗಳೂ ಜಠರ ರೋಗಗಳೂ ಉಂಟಾಗುವವು. ಧರ್ಮಕಾರ್ಯಗಳು ನಿಮ್ಮಲ್ಲಿ ಲೋಪವಾಗುವುವು. ಆತ್ಮಸಾಕ್ಷಿಗೆ ವಿರೋಧವಾಗಿ ಕೆಲವು ಕಾರ್ಯಗಳಲ್ಲಿ ನೀವು ಪ್ರವರ್ತಿಸುವಿರಿ. ಇದರ ಪರಿಣಾಮವು ಬಹಳ ಕೆಟ್ಟದ್ದಿದೆ. ತಾ. ೬. ೭. ೮ರಲ್ಲಿ ವಿಶೇಷ ಹಾನಿಯಿದೆ.

ಕಾರ್ಯನಾಶ, ಶೋಕ, ಪ್ರವಾಸಾದಿ ಕಾರ್ಯಗಳು ಅಕಸ್ಮಾತ್ ಸಂಭವಿಸಿ ಹೆಚ್ಚಾಗಿ ಧನವ್ಯಯವಾಗುವದು.

**ಸಿಂಹ:** —

ಈ ವಾರದಲ್ಲಿ ನೀವು ಯಾವ ಕಾರ್ಯವನ್ನೂ ಕೂಡ ಇನ್ನೊಬ್ಬರ ಅಪೇಕ್ಷೆಯಿಲ್ಲದೆ ಸ್ವಯಮೇವ ನಿರ್ವಹಿಸಲು ಶಕ್ತರಾಗುವಿರಿ. ಪುತ್ರಮಿತ್ರರೂ ಕೂಡ ನಿಮಗೆ ಅನುಕೂಲರಾಗಿಯೇ ಇರುವರು. ಆದರೂ ದೈಹಿಕ ಸುಖವು ಮತ್ತು ಮಾನಸಿಕ ಸುಖವು ಏನೂ ಇಲ್ಲದಿರುವುದರಿಂದ ಅತ್ಯಂತಶೋಕಾವಿಷ್ಟರಾದ ನೀವು ಉತ್ಸಾಹಹೀನರಾಗಿ ಯಾವ ಕಾರ್ಯದಲ್ಲೂ ಪ್ರವರ್ತಿಸದೆ ಸೋಮಾರಿಯಾಗುವಿರಿ. ಧನಾಗಮದ ಮಾರ್ಗವು ಯಾವ ರೀತಿಯಿಂದಲೂ ಇಲ್ಲವು. ನಾನಾ ಮಾರ್ಗಗಳಿಂದ ಧನವ್ಯಯವೇ ಆಗುತ್ತಿರುವುದು. ಆದಕಾರಣ ವಾರದ ಆದ್ಯಂತ ದಿನಗಳಲ್ಲಿ ಧನ ಮತ್ತು ಆರೋಗ್ಯ ಭಾಗದಲ್ಲಿ ಚೆನ್ನಾಗಿ ದೃಷ್ಟಿಯನ್ನಿಡಬೇಕು.

**ಕನ್ಯಾ:** —

ಅನೇಕ ವಾರಗಳಿಂದ ಕಷ್ಟಗಳನ್ನೇ ಅನುಭವಿಸುತ್ತಿದ್ದು ಸ್ವಪ್ನದಲ್ಲೂ ಕೂಡ ಸುಖಸಿಗದ ನಿಮ್ಮ ಭಾಗ್ಯಲಕ್ಷ್ಮಿಯು ಈ ವಾರದಲ್ಲಿ ನಿಮ್ಮನ್ನಾಲಿಂಗಿಸಲು ಮುಂಬರುತ್ತಿರುವಳು. ಆದಕಾರಣ ನಿಮಗೆ ಶುಭಾಶುಭ ಫಲಗಳು ಮಿಶ್ರವಾಗಿದ್ದು ಏನೊಂದು ವಿಶೇಷ ಪರಿಸ್ಥಿತಿಯು ಈ ವಾರದಲ್ಲಾಗಲಾರದು. ಎಲ್ಲರೂ ಹೆಚ್ಚಾಗಿ ನಿಮ್ಮನ್ನು ಮಾನಿಸುವರು. ಪುತ್ರರಿಂದಲೂ, ದುರ್ಜನರಿಂದಲೂ ಕೂಡ ಧನಸಿಗುವುದು. ಅನೇಕ ಕಾರ್ಯಗಳಲ್ಲಿ ಧನಲಾಭವಾಗುವ ಯೋಗವಿದೆ. ಆದಕಾರಣದಿಂದಲೇ ಪರಿಜನರು ಬಂಧುಜನರು ಮಿತ್ರರು ಕೂಡ ನಿಮಗೆ ಹೆಚ್ಚುವರು. ಹಿಂದಿನ ಪರಿಸ್ಥಿತಿಯನ್ನು ಮರೆಯದಿರತಕ್ಕ ನಿಮಗೆ ಧನವ್ಯಯದ

ಭಾಗದಲ್ಲಿ ಕೈ ಬಹಳ ಹಿಂದೆ ಸರಿಯುವದು ಇದರಿಂದ ಕೆಲವರ ಸಂದೆಗೆ ಪಾತ್ರರಾಗುವಿರಿ. ಉದರ ಸಂಬಂಧಿ ರೋಗ ಮತ್ತು ಪ್ರಯಾಣದ ಸಲುವಾಗಿ ಹಣ ಖರ್ಚಾಗುವುದು. ತಾ 5 ರಿಂದ 8ರ ವರೆಗಿನ ದಿನಗಳು ಉತ್ತಮವಿವೆ.

**ತುಲಾ:—**

ಈ ವಾರವು ನಿಮಗೆ ಸರ್ವ ಭಾಗದಲ್ಲಿಯೂ ಉತ್ತಮವಿರುವುದು. ಇದೊಂದು ವಿಷಯವನ್ನು ಮಾತ್ರ ನೀವು ನೆನಪಿನಲ್ಲಿಟ್ಟುಕೊಳ್ಳತಕ್ಕದ್ದು. ಏನಂದರೆ ನಿಮ್ಮ ಬಂಧುಗಳು ಬಾಂಧವರು ಎಂಬ ವಿಶ್ವಾಸದಿಂದ ಅವರವರ ಯಾವದೊಂದು ಜವಾಬ್ದಾರಿ ಕಾರ್ಯವನ್ನು ಬಿಡಬೇಡಿ ಮನಸ್ಸಿನಲ್ಲಿರತಕ್ಕ ಗುಟ್ಟಿನ ವಿಷಯವನ್ನು ಅವರ ಮುಂದೆ ಬಿಚ್ಚಬೇಡಿ. ನಿಜವಾಗಿಯೂ ನಿಮ್ಮಲ್ಲವರು ಎರಡೆಣಿಸಿರುವರು. ನೀವು ಕಾರ್ಯಗಳಲ್ಲಿ ವಿಜಯಿಗಳಾಗಿ ಕೀರ್ತಿಶಾಲಿಗಳಾಗುವಿರಿ. ಎಲ್ಲೆಲ್ಲಿಯೂ ನಿಮಗೆ ಮರ್ಯಾದೆ ಪುರಸ್ಕಾರಗಳು ಸಿಗುವವು. ಅನೇಕ ರೀತಿಯಿಂದ ಧನಲಾಭವಾಗುವದು. ಶತ್ರುಗಳು ಮಿತ್ರರಾಗಿ ಪರಿಣಮಿಸಿ ನಿಮ್ಮ ಮಿತ್ರವೃಂದವು ಅಭಿವೃದ್ಧಿಯನ್ನೈದುವುದು. ನಿಮ್ಮ ಭೋಗೇಚ್ಛೆಗೆ ಯಾವ ಭಾಗದಲ್ಲೂ ಕೊರತೆಯಿಲ್ಲವು. ವಾರದ ಆದ್ಯಂತ ದಿನಗಳು ಬಹಳ ಅನುಕೂಲವಿರುವವು.

**ವೃಶ್ಚಿಕ:—**

ಶರೀರ ಪ್ರಕೃತಿಯ ವಿಷಯದಲ್ಲಿ ಅವಯವಗಳಲ್ಲಿ ನೋವುಂಟಾದರೂ ಕೂಡಲೇ ಗುಣಹೊಂದುವದು. ಸೇವಕ ಜನರೂ ಪುತ್ರರೂ ಅವಿಧೇಯರಾಗಿ ವರ್ತಿಸುವುದರಿಂದ ನಿಮ್ಮೊಳಗೆನೇ ಕಲಹವಾಗುವದು. ಮಿತ್ರ ಜನರೂ ಬಂಧುಗಳೂ ಕೂಡ ಅನುಕೂಲರಾಗಿರುವರು. ಕಾರ್ಯದಕ್ಷತೆಯು ನಿಮ್ಮಲ್ಲಿ ಚೆನ್ನಾಗಿರುವುದರಿಂದ ಸಾರ್ವಜನಿಕ ಕಾರ್ಯಗಳಲ್ಲಿ ಮುಂದಾಳಾಗಿ ಕಾರ್ಯ ನಿರ್ವಹಿಸುವಿರಿ. ಸಕಲ ಜನರಿಂದ ಮನ್ನಣೆ ಸಿಗುವದು. ಆರ್ಥಿಕ ಭಾಗವು ಬಹಳ ಚೆನ್ನಾಗಿರುವುದರಿಂದ ಇತರ ಯಾವ ವಿಷಯಕ್ಕೂ ಕೊರತೆಯಿಲ್ಲ. ಸುಖವಾಗಿ ದಿನಗಳೆಯುವಿರಿ. ತಾ 2 ಮತ್ತು 6, 7, 8 ಈ ದಿನಗಳಲ್ಲಿ ಕಲಹವೂ ಮಾನ ಧನಗಳಿಗೆ ಹಾನಿಯೂ ಸಂಭವಿಸುವವು.

**ಧನು:—**

ನಿಮ್ಮ ಮನಸ್ಸು ಹಾವುಗಳ ಗಮನದಂತೆ ಅತ್ಯಂತ ವಕ್ರವಾಗಿಯೂ ಕುಟಿಲವಾಗಿಯೂ ಇರುವುದು. ಮಾತ್ರವಲ್ಲ, ಹೆಚ್ಚಾಗಿ ಪಾಪಕರ್ಮಗಳಲ್ಲೇ ಆಸಕ್ತಿಯುಳ್ಳದಾಗುವುದು. ಆದ ಕಾರಣದಿಂದ 'ಯಾರಿಗೆ ಯಾರಿಲ್ಲ, ದಾರಿಗೆ ಸುಂಕವಿಲ್ಲ" ವೆಂದಂತೆ ಮಿತ್ರರಾಗಲಿ ಪತ್ನಿಯಾಗಲಿ ಪುತ್ರರಾಗಲಿ ಬಂಧುಗಳಾಗಲಿ ಯಾರೂ ನಿಮ್ಮ ಪಾಲಿಗೆ ಇಲ್ಲವೆಂದೇ ಹೇಳಬೇಕು. ಧನಭಾಗದಲ್ಲಿ ಆಯುವ್ಯಯಗಳು ಏಕ ರೀತಿಯಾಗಿರುವುದರಿಂದ ಚಿಂತಿಸಬೇಕಾದ್ದಿಲ್ಲವು. ಆರಂಭಿಸಿದ ಕಾರ್ಯಗಳು ತಮ್ಮಂತೆಯೇ ಕೊನೆಹೊಂದುವವು. ಧನಲಾಭ ವಸ್ತ್ರಲಾಭಗಳಾದರೂ ಅವು ಸ್ಥಿರವಾಗಿ ನಿಲ್ಲುವಂತಿಲ್ಲ. ಶರೀರ ಪೀಡೆಯೂ ಮನೋವ್ಯಥೆಯೂ ಹೆಚ್ಚುವುದು. ತಾ. 2, 5, 7, ಈ ದಿನಗಳು ಉತ್ತಮವಿರುವುದರಿಂದ ಭೋಗ, ಜಯ, ಸ್ತ್ರೀಸುಖಗಳನ್ನು ಹೊಂದುವಿರಿ.

**ಮಕರ:—**

ಈ ವಾರವು ಹೆಚ್ಚಿನ ಭಾಗದಲ್ಲಿ ನಿಮಗೆ ಅನುಕೂಲವಿಲ್ಲವು. ಹಣದ ಲೇವಾದೇವಿ ಸಂಬಂಧವಾಗಿ ಕಲಹವು ಹುಟ್ಟಿ ಕೋರ್ಟಿಗೆ ತಿರುಗುವ ಯೋಗವಿದೆ. ಕಾರ್ಯಗಳಲ್ಲಿ ಹೆಚ್ಚಾಗಿ ಸೋಲು ಪ್ರಾಪ್ತಿಯಾಗುವುದಲ್ಲದೆ ಧನ ವ್ಯಯವು ಖಂಡಾ ಆಗುವುದು. ಅವಿವೇಕದಿಂದ ನಿಮ್ಮ ಸ್ಥಾನ ಭ್ರಷ್ಟರಾಗುವಿರಿ. ಮಾತ್ರವಲ್ಲ, ಜನರಲ್ಲಿ ದೀರ್ಘ ದ್ವೇಷವನ್ನು ಕಟ್ಟಿಕೊಳ್ಳುವಿರಿ. ದೇಹಾರೋಗ್ಯವು ಸಮೀಚೀನವಾಗಿಲ್ಲವು. ಅಂತೂ ಕೆಲವು ಭಾಗದಲ್ಲಿ ಅಂದರೆ ಶತ್ರು ನಿಗ್ರಹ ವಿಷಯದಲ್ಲಿ ಒಳ್ಳೇ ಸಮರ್ಥರಿರುವಿರಿ. ಮತ್ತು ಮಿತ್ರರ ಸಹಾಯವೂ ಅವರಿಂದಾಗಿ ಅಭಿವೃದ್ಧಿ ಮತ್ತು ಲಾಭವೂ ಆಗುವುದು. ತಾ. 2ಮತ್ತು 6, 7 ರಲ್ಲಿ ಧನವ್ಯಯ, ಕಾರ್ಯ ವಿಘ್ನ.

**ಕುಂಭ:—**

ನಿಮಗೂ ಕೂಡ ಈ ವಾರದಲ್ಲಿ ಇಷ್ಟ ಕಾರ್ಯಗಳಿಗಿಂತ ಅನಿಷ್ಟ ಕರ್ಮಗಳೇ ಹೆಚ್ಚಿಗಿರುವುವು. ನಿಷ್ಕಾರಣವಾಗಿ ಜನರು ತಾವಾಗಿಯೇ ನಿಮ್ಮೊಡನೆ ಜಗಳಾಡುವರು. ವೇಷಭೂಷಣಗಳಿಂದ ಬಹಳ ಅಲ್ಪ ಜನರಂತೆ ತೋರಿಸಿಕೊಳ್ಳುವಿರಿ ನಿಜ, ಕೈಗಾರಿಕೆ ಮುಂತಾದುವುಗಳಿಂದ ಗಳಿಸಲ್ಪಟ್ಟ ಧನವೂ ಕೂಡ ಬಹಳ ಸಮಯ ನಿಮ್ಮ ಕೈಯಲ್ಲಿ ನಿಲ್ಲುವದಿಲ್ಲವು. ಧೈರ್ಯವೂ ಬಲವೂ ನಿಮ್ಮಲ್ಲಿ ಕಡಿಮೆಯಾಗಿರುವುದರಿಂದ ಯಾವ ಕಾರ್ಯ ಮಾಡಲೂ ನೀವು ಹಿಂಜರಿಯುವಿರಿ. ನಿಮ್ಮ ಅರ್ಧಾಂಗಿಯೇ ನಿಮ್ಮೊಡನೆ ಜಗಳಾಡುವುದರಿಂದ ಸಂಸಾರವು ನಿಸ್ಸಾರವೆಂದು ನಿಮಗೆ ತೋರಬಹುದು. ಆದರೂ ನಿಮ್ಮ ವೈರಿಗಳ ನಾಶದಿಂದಲೂ ಮತ್ತು ಕಾರ್ಯಜಯ, ವಸ್ತ್ರಲಾಭಗಳಿಂದಲೂ ಸ್ವಲ್ಪ ಮಟ್ಟಿಗೆ ನಿಮಗೆ ಸುಖವಿರುವದು. ತಾ. 2 ಮತ್ತು 5, 6, 7 ಈ ದಿನಗಳು ಉತ್ತಮವಿವೆ.

**ಮೀನ:—**

ಧರ್ಮ ಕರ್ಮಗಳನ್ನು ಕ್ರಮವಾಗಿ ನಡೆಸುವುದರಿಂದ ಸ್ಥಾನ ಗೌರವಗಳಿಗೇನೂ ಕುಂದಿಲ್ಲವು. ವಸ್ತ್ರ ವಸ್ತಾದಿಗಳ ಲಾಭವನ್ನು ಹೊಂದುವಿರಿ. ಆದರೂ ನಿಮ್ಮ ಪ್ರಕೃತಿಯು ಉದರ ರೋಗ ರೂಪದಿಂದ ಕೆಡುವದು. ಸ್ವಜನರ ವಿಯೋಗದಿಂದಲೂ ದೇಹ ಪೀಡೆಯಿಂದಲೂ ಕಲಹದಿಂದಲೂ ವಿಶೇಷ ವ್ಯಸನಾಕ್ರಾಂತರಾದ ನೀವು ಊರನ್ನು ಅಲೆದು ಹೆಚ್ಚಾಗಿ ಧನವ್ಯಯಕ್ಕೆ ಭಾಗಿಗಳಾಗುವಿರಿ ದೇಹದ ಮುಖ್ಯ ಸಾರಭೂತಗಳಾದ ಸಪ್ತ ಧಾತುಗಳ ನಾಶದಿಂದಾಗಿ ಶರೀರದ ಬಣ್ಣವು ಬದಲಾಯಿಸುವದು. ಇವುಗಳಲ್ಲಿ ಹೆಚ್ಚಿನ ದಿನಗಳು ತಾ. 5, 6, 7ರಲ್ಲಿ ಕಾರ್ಯರೂಪಕ್ಕೆ ಬರುವವು.

ಬಾಲಭಾಸ್ಕರ

Printed and published by P Venkataramanacharya for and on behalf of SUPPLY AGENCY LTD. at Manipal Power Press, Udipi.

# PLAN YOUR FAMILY'S FUTURE

EVERY INDEPENDENT STATE HAS ITS OWN FIVE OR SEVEN YEAR'S PLANS FOR THE ECONOMIC BETTERMENT OF ITS PEOPLE; EVEN SO HAS EVERY THOUGHTFUL INDIVIDUAL IN EVERY WALK OF LIFE A WELL THOUGHT OUT PLAN OF HIS OWN FOR THE FUTURE WELFARE OF HIS FAMILY.

## PLAN YOUR FAMILY'S FUTURE NOW

If you are a Businessman our Pigmy Deposit Scheme should appeal to you most since it is a Daily Deposit collected at your door. These Daily Deposits grow even as Children do and are therefore well suited for being earmarked for your **Daughter's Marriage** or **Son's Education.**

# The Canara Industrial & Banking Syndicate, Limited.

[INCORPORATED IN BRITISH INDIA]

Estd. Head Office: **UDIPI**, S. INDIA. 1925

MEMBER:

RESERVE BANK OF INDIA. BANKERS' CLEARING HOUSE, BOMBAY.

| | | |
|---|---|---|
| Authorised Capital | Rs. | 10,00,000 |
| Issued Capital | ,, | 8,00,000 |
| Subscribed Capital | ,, | 7,74,500 |
| Paid up Capital | ,, | 3,86,880 |
| Reserves | ,, | 2,16,700 |

**TOTAL RESOURCES EXCEED 51 LAKHS**

REGD. NO. M.3935.
*Antaranga, 2nd Oct. 19.*

# ಸಪ್ಲೈ ಏಜನ್ಸಿ ಲಿಮಿಟೆಡ್ ಉಡುಪಿ

## ನಿರಖು ಠೇವಣಾತಿಗಳಿಗೆ ಬಡ್ಡಿಯ - - - - - ದರಗಳು

| | | |
|---|---|---|
| 3 ರಿಂದ | 6 ತಿಂಗಳ ವರೆಗೆ | ಸೇ. 4 |
| 7 ರಿಂದ | 11 ತಿಂಗಳ ವರೆಗೆ | ಸೇ. 5 |
| 12 ರಿಂದ | 18 ತಿಂಗಳ ವರೆಗೆ | ಸೇ. 6 |

ಎರಡು ವರ್ಷದ ಮೇಲಿನವಕ್ಕೆ ಪ್ರತ್ಯೇಕ ದರಗಳು ಇವೆ

- ದೀನಬಂಧು ನಿಧಿ
- ಇಂಡಸ್ಟ್ರಿಯಲ್ ಕ್ಯಾಶ್ ಸರ್ಟಿಫಿಕೇಟ್
- ಸೇವ್ ಏಸ್ ಯು ಪ್ಲೀಸ್
- ಇಂಡಸ್ಟ್ರಿಯಲ್ ಡಿಪಾಜಿಟ್

ಈ ಯೋಜನೆಗಳ ಮಾಹಿತಿಗೆ ಬರೆಯಿರಿ.

**FINANCE DEPARTMENT**

**SUPPLY AGENCY LIMITED UDIPI**